ಕರ್ನಾಟಕ ಸರ್ಕಾರ

# ತಿಳಿ ಕನ್ನಡ

## ೯

## ಒಂಬತ್ತನೆಯ ತರಗತಿ

### ದ್ವಿತೀಯ ಭಾಷಾ ಕನ್ನಡ ಪಠ್ಯಪುಸ್ತಕ



## ೨೦೧೫

**ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)**
೧೦೦ ಅಡಿ ವರ್ತುಲ ರಸ್ತೆ, ಬನಶಂಕರಿ ೩ನೇ ಹಂತ,
ಬೆಂಗಳೂರು – ೫೬೦ ೦೮೫

# ಮುನ್ನುಡಿ

2005ನೇ ರಾಷ್ಟ್ರೀಯ ಪಠ್ಯಕ್ರಮದ ಆಧಾರದ ಮೇಲೆ ರಚಿತವಾದ ಕರ್ನಾಟಕ ರಾಜ್ಯ ಪಠ್ಯವಸ್ತುವಿನ ಆಧಾರದ ಮೇಲೆ ಕರ್ನಾಟಕ ಪಠ್ಯಪುಸ್ತಕ ಸಂಘವು 2010 ನೇ ಸಾಲಿನಿಂದ ಒಂದನೇ ತರಗತಿಯಿಂದ ಹತ್ತನೇ ತರಗತಿವರೆಗಿನ ಪಠ್ಯಪುಸ್ತಕಗಳ ರಚನಾ ಕಾರ್ಯದಲ್ಲಿ ತೊಡಗಿದೆ. ಒಟ್ಟು 12 ಭಾಷೆಗಳಲ್ಲಿ ಭಾಷಾ ಪಠ್ಯಪುಸ್ತಕಗಳನ್ನು ಹಾಗೂ ಕೋರ್ ವಿಷಯಗಳನ್ನು 7 ಮಾಧ್ಯಮಗಳಲ್ಲಿ ರಚನೆ ಮಾಡಲಾಗುತ್ತಿದೆ. 1 ರಿಂದ 4 ನೇ ತರಗತಿಯವರೆಗೆ ಪರಿಸರ ವಿಜ್ಞಾನ, ಗಣಿತ ಮತ್ತು 5 ರಿಂದ 10 ನೇ ತರಗತಿಯವರೆಗೆ ಕೋರ್ ವಿಷಯಗಳಾದ ಗಣಿತ, ವಿಜ್ಞಾನ ಮತ್ತು ಸಮಾಜ ವಿಜ್ಞಾನಗಳಿರುತ್ತವೆ.

**2005ರ ರಾಷ್ಟ್ರೀಯ ಪಠ್ಯಕ್ರಮವು ಈ ಕೆಳಗಿನ ವೈಶಿಷ್ಟ್ಯಗಳನ್ನು ಹೊಂದಿದೆ.**

- ಕಲಿಕೆಯನ್ನು ಜೀವನದ ಅವಶ್ಯಕತೆಗಳೊಂದಿಗೆ ಜೋಡಿಸುವುದು
- ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು
- ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು
- ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಬಳಸುವುದು
- ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ ಅವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು
- ಶಿಕ್ಷಣವನ್ನು ಇಂದಿನ ಹಾಗೂ ಭವಿಷ್ಯದ ಜೀವನಾವಶ್ಯಕತೆಗಳಿಗೆ ಹೊಂದುವಂತೆ ಮಾಡುವುದು
- ವಿಷಯಗಳ ಮೇರೆಗಳನ್ನು ಮೀರಿ ಅವುಗಳಿಗೆ ಸಮಗ್ರದೃಷ್ಟಿಯ ಬೋಧನೆಯನ್ನು ಅಳವಡಿಸುವುದು
- ಶಾಲೆಯ ಹೊರಗಿನ ಬದುಕಿಗೆ ಜ್ಞಾನ ಸಂಯೋಜನೆ
- ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿ ಪಡಿಸುವುದು.

ನೂತನ ಪಠ್ಯಪುಸ್ತಕಗಳಲ್ಲಿ ನೂತನ ವಿಧಾನಗಳಾದ ಅಂತರ್ಗತ ವಿಧಾನ (Integrated Approach), ರಚನಾತ್ಮಕ ವಿಧಾನ (Constructive Approach) ಹಾಗೂ ಸುರುಳಿಯಾಕಾರದ ವಿಧಾನ (Spiral Approach) ಗಳನ್ನು ಅಳವಡಿಸಲಾಗಿದೆ.

ಪಠ್ಯಪುಸ್ತಕಗಳ ವಿಷಯ ಹಾಗೂ ಅಭ್ಯಾಸಗಳು ವಿದ್ಯಾರ್ಥಿಗಳನ್ನು ಯೋಚನೆ ಮಾಡುವಂತೆ ಮಾಡಿ, ಚಟುವಟಿಕೆಗಳ ಮೂಲಕ ಜ್ಞಾನ ಹಾಗೂ ಸಾಮರ್ಥ್ಯಗಳನ್ನು ಪಡೆಯುವಂತೆ ಮಾಡುವ ಪ್ರಯತ್ನ ಮಾಡಲಾಗಿದೆ. ಪಠ್ಯವಸ್ತುಗಳೊಂದಿಗೆ ಅತ್ಯಂತ ಅವಶ್ಯಕ ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಬಳಸಲಾಗಿದೆ. ಈ ನೂತನ ಪಠ್ಯಪುಸ್ತಕಗಳು ಪರೀಕ್ಷಾ ದೃಷ್ಟಿಯಿಂದ ರಚಿತವಾಗಿಲ್ಲ. ಬದಲಾಗಿ ಅವುಗಳು ವಿದ್ಯಾರ್ಥಿಗಳ ಸರ್ವಾಂಗೀಣ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿವೆ. ತನ್ಮೂಲಕ ಅವರನ್ನು ಸ್ವತಂತ್ರ ಭಾರತದ ಸ್ವಸ್ಥಸಮಾಜದ ಉತ್ತಮ ಪ್ರಜೆಗಳನ್ನಾಗಿ ಮಾಡುವ ಪ್ರಯತ್ನ ನಡೆದಿದೆ.

ಭಾಷಾಕಲಿಕೆಯಲ್ಲಿ ಅತ್ಯಂತ ಮುಖ್ಯ ಗುರಿಗಳಾದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು ಹಾಗೂ ಆಕರಗ್ರಂಥಗಳಿಂದ ವಿಷಯ ಸಂಗ್ರಹಣೆಯಂತಹ ಕ್ಷೇತ್ರವಾರು ಸಾಮರ್ಥ್ಯಗಳಿಗೆ

ಒತ್ತು ನೀಡಲಾಗಿದೆ. ಈ ಕೌಶಲ್ಯಗಳೊಂದಿಗೆ ಕ್ರಿಯಾತ್ಮಕ ವ್ಯಾಕರಣ, ಸೌಂದರ್ಯಪ್ರಜ್ಞೆ, ಪ್ರಶಂಸಾ ಮನೋಭಾವ, ಮೌಲ್ಯಗಳ ಸಂವರ್ಧನೆಗೆ ಅನುವು ಮಾಡಿಕೊಡಬೇಕು. ಈ ಸಾಮರ್ಥ್ಯ ಮಕ್ಕಳಲ್ಲಿ ಬಂದಾಗ ಅವರು ಪರೀಕ್ಷೆಗಳಿಗಾಗಿ ಕಂಠಪಾಠಕ್ಕೆ ಶರಣು ಹೋಗಬೇಕಾಗಿಲ್ಲ. ಪಠ್ಯಪುಸ್ತಕವು ಭಾಷಾ ಕೌಶಲ್ಯಗಳ ಸಂವರ್ಧನೆಗೆ ಒಂದು ಪೂರಕವಸ್ತುವೆಂದು ಪರಿಗಣಿಸಲು, ಮಕ್ಕಳ ಮನೋವೈಶಾಲ್ಯವನ್ನು ಬೆಳೆಸಲು ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಚಟುವಟಿಕೆಗಳನ್ನು ಪಠ್ಯಪುಸ್ತಕದಲ್ಲಿ ಒದಗಿಸಲಾಗಿದೆ. ಮಿತ್ರರೊಂದಿಗೆ ಗುಂಪುಗಳಲ್ಲಿ ಚರ್ಚೆಯ ಮೂಲಕ ಅವರ ಅಭಿವ್ಯಕ್ತಿ ಹಾಗು ಸಂವಹನ ಕೌಶಲ್ಯಗಳ ಸಂವರ್ಧನೆಯೇ ಕಲಿಕೆ ಗುರಿಯೆಂದು ಅಂತಹ ಚಟುವಟಿಕೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಈ ರೀತಿಯ ಚಟುವಟಿಕೆಗಳು ಮಕ್ಕಳಲ್ಲಿ ಕಲಿಯುವ ಕಲೆ (learning to learn) ಹಾಗೂ ಕಲಿತುದುದನ್ನು ಜೀವನದಲ್ಲಿ ಅಳವಡಿಸುವ ಶಕ್ತಿ (learning to do) ಯನ್ನು ಮಕ್ಕಳಲ್ಲಿ ವೃದ್ಧಿಮಾಡುತ್ತದೆ.

ಕರ್ನಾಟಕ ಪಠ್ಯಪುಸ್ತಕ ಸಂಘವು ಈ ಪುಸ್ತಕದ ತಯಾರಿಯಲ್ಲಿ ಸಹಕರಿಸಿದ ಸಮಿತಿಯ ಅಧ್ಯಕ್ಷರಿಗೆ, ಸದಸ್ಯರಿಗೆ, ಕಲಾಕಾರರಿಗೆ, ಪರಿಶೀಲಕರಿಗೆ, ಸಂಯೋಜಕ ಅಧಿಕಾರಿಗಳಿಗೆ, ಶಿಕ್ಷಣ ಮಹಾವಿದ್ಯಾಲಯಗಳ ಸಿಬ್ಬಂದಿವರ್ಗದವರಿಗೆ, ಜಿಲ್ಲಾ ತರಬೇತಿ ಸಂಸ್ಥೆಗಳು, ರಾಜ್ಯ ಮಟ್ಟದ ಪಠ್ಯಪುಸ್ತಕ ಸಂಪಾದಕ ಮಂಡಳಿಯ ಸದಸ್ಯರಿಗೆ ಮತ್ತು ಪುಸ್ತಕವನ್ನು ಸುಂದರವಾಗಿ ಮುದ್ರಿಸಿದ ಮುದ್ರಕರಿಗೆ ತನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಕೆಲವು ಸಾಹಿತಿಗಳು ಹಾಗೂ ಕವಿಗಳ ಕೃತಿಗಳನ್ನು ಈ ಪಠ್ಯಪುಸ್ತಕಗಳಲ್ಲಿ ಅಳವಡಿಸಲಾಗಿದೆ. ಈ ವಿಚಾರದಲ್ಲಿ ತಮ್ಮ ಒಪ್ಪಿಗೆಯನ್ನು ನೀಡಿರುವ ಬರಹಗಾರರಿಗೆ ಹಾಗೂ ಕವಿಗಳಿಗೆ ಪಠ್ಯಪುಸ್ತಕ ಸಂಘ ಆಭಾರಿಯಗಿದೆ.



**ಪ್ರೊ. ಜಿ ಎಸ್ ಮುಡಂಬಡಿತ್ತಾಯ**
ಮುಖ್ಯ ಸಂಯೋಜಕರು
ಪಠ್ಯಪುಸ್ತಕ ಪರಿಷ್ಕರಣೆ ಹಾಗೂ ಪಠ್ಯಪುಸ್ತಕ ರಚನೆ
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು

**ನಾಗೇಂದ್ರ ಕುಮಾರ್**
ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು

# ಪಾಠ ಮಾಡುವ ಮುನ್ನ...

ಹದಿಹರಯದ ಹುಡುಗರಿಗೆ ಕನ್ನಡ ಕಲಿಸುವುದು ಎಂದರೇನು? ವಾಸ್ತವವಾಗಿ ಕನ್ನಡ ಕಲಿಸುವುದು ಎಂದರೆ ಕನ್ನಡವನ್ನು ಕೇಳಿಸಿಕೊಳ್ಳುವುದು, ಅರ್ಥಮಾಡಿಕೊಳ್ಳುವುದು, ಅರ್ಥ ಮಾಡಿಕೊಂಡದ್ದನ್ನು ಚೆನ್ನಾಗಿ ಅಭಿವ್ಯಕ್ತಿಸುವುದು ಹಾಗೂ, ತಮಗೆ ಉಂಟಾದ ಭಾವನೆಗಳು ಮತ್ತು ಆಲೋಚನೆಗಳನ್ನು ತಪ್ಪಿಲ್ಲದಂತೆ ಕನ್ನಡದಲ್ಲಿ ಬರೆಯುವ ಹಾಗೆ ವಿದ್ಯಾರ್ಥಿಗಳನ್ನು ತಯಾರು ಮಾಡುವುದು – ಇವೇ ಆಗಿದೆ. ಈ ಅಂಶಗಳನ್ನು ಶೂನ್ಯದಲ್ಲಿ ಕಲಿಸಿಕೊಡಲಾಗುವುದಿಲ್ಲ. ಇದಕ್ಕೆ ಪೂರಕವಾಗಿ ಒಂದು ಒಳ್ಳೆಯ ಪಠ್ಯವಿರಬೇಕಾಗುತ್ತದೆ. ಇಂತಹ ಪಠ್ಯವನ್ನು ಸಿದ್ಧಪಡಿಸುವಾಗ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿರುವ ತರಗತಿ, ಅವರ ವಯೋಮಾನವನ್ನು ಗಮನದಲ್ಲಿರಿಸಿಕೊಂಡು, ಒಟ್ಟು ಕನ್ನಡ ಭಾಷೆ, ಸಾಹಿತ್ಯ ಹಾಗೂ ಸಂಸ್ಕೃತಿಗಳ ಪರಂಪರೆಯನ್ನು ಕಟ್ಟಿ ಕೊಟ್ಟಿರುವ ಬರವಣಿಗೆಯ ಪ್ರಾತಿನಿಧಿಕ ಪಠ್ಯಕ್ರಮವೊಂದನ್ನು ಆಯ್ಕೆ ಮಾಡಿಕೊಳ್ಳಬೇಕಾಗುತ್ತದೆ. ಈ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಈ ಪಠ್ಯವನ್ನು ಸಿದ್ಧಗೊಳಿಸಿದೆ.

ವಿದ್ಯಾರ್ಥಿಗಳು ಮೇಲಿನ ಅಂಶಗಳನ್ನು ಕಲಿಯುವುದರ ಜೊತೆಗೆ ಒಳ್ಳೆಯ ಅಭಿರುಚಿ, ವಾಚನಾಸಕ್ತಿ, ಬದುಕಿನ ಘನತೆಯನ್ನು ಕುರಿತ ಗೌರವ, ವಿವಿಧ ಕಾವ್ಯಶಾಸ್ತ್ರ ಕಲಾ ವಿನೋದಗಳನ್ನು ಕುರಿತಂತೆ ಪ್ರಜ್ಞಾಪೂರ್ವಕ ಎಚ್ಚರ, ವಿವೇಕಯುತ ವಸ್ತುನಿಷ್ಠ ಚಿಂತನೆ, ಜೀವನ ಪ್ರೀತಿ – ಇವುಗಳನ್ನು ಈ ಪಠ್ಯದ ಮೂಲಕ ಕುದುರಿಸಿಕೊಳ್ಳುತ್ತಾರೆ ಎಂಬುದು ಪಠ್ಯಪುಸ್ತಕ ರಚನಾ ಸಮಿತಿಯ ಆಶಯ. ಈ ನಿಟ್ಟಿನಲ್ಲಿ, ಬೋಧನೆ ಮಾಡುವ ಅಧ್ಯಾಪಕರ ಪಾತ್ರ ತುಂಬಾ ಜವಾಬ್ದಾರಿಯುತವಾದದ್ದು.

ನಾಡಿನ ಮಹತ್ವದ ಲೇಖಕರ ಕಾವ್ಯ, ವೈಚಾರಿಕ ಬರವಣಿಗೆ, ಪ್ರಬಂಧ ಮುಂತಾದ ಲೇಖನಗಳು, ಅವುಗಳಿಗೆ ಪೂರಕವಾಗಿ ನೀಡಿರುವ ವ್ಯಾಕರಣ ವಿಶೇಷ, ಭಾಷಾವಿಚಾರ, ಅಭ್ಯಾಸ ಮುಂತಾದವುಗಳನ್ನು ವಿದ್ಯಾರ್ಥಿಗಳಿಂದ ಅನುಷ್ಠಾನಕ್ಕೆ ತರಿಸಿ, ಪಠ್ಯಭಾಗದಲ್ಲಿನ ಸೂಕ್ಷ್ಮಾಂಶಗಳು ಹಾಗೂ ಒಳನೋಟಗಳನ್ನು ವಿದ್ಯಾರ್ಥಿಗಳ ಮನಸ್ಸಿಗೆ ರವಾನೆಯಾಗುವಂತೆ ಪಾಠ ಮಾಡುವ ಪ್ರಕ್ರಿಯೆಯಲ್ಲಿ ಅಧ್ಯಾಪಕರು ಕ್ರಿಯಾತ್ಮಕವಾಗಿ ತಮ್ಮನ್ನು ತೊಡಗಿಸಿಕೊಳ್ಳಬೇಕು. ಶೈಕ್ಷಣಿಕ ಹೊರಸಂಚಾರದಂತಹ ಚಟುವಟಿಕೆಗಳಲ್ಲಿ ವಿದ್ಯಾರ್ಥಿಗಳಿಗೆ ವಿಷಯ ಮನನ ಮಾಡಿಕೊಡಬಹುದು. ಶಿಕ್ಷಕರು ವಿದ್ಯಾರ್ಥಿಗಳನ್ನು ಧರ್ಮಾತೀತವಾಗಿ ವೈಚಾರಿಕವಾಗಿ ಬಲಪಡಿಸಬೇಕಾದ್ದು ಅಗತ್ಯ. ಇದಕ್ಕೆ ಈ ಪಠ್ಯ ನೆರವು ನೀಡಿದರೆ ನಮ್ಮ ಶ್ರಮವು ಸಾರ್ಥಕ.

ಮೇಲ್ಕಂಡ ವಿಷಯಗಳನ್ನು ಕುರಿತು ಜಿಜ್ಞಾಸೆ ಮಾಡಿ ಒಂದು ಒಳ್ಳೆಯ ಪಠ್ಯವೆಂದು ಸಮಿತಿಯು ನಂಬಿರುವ ಈ ಪಠ್ಯವನ್ನು ಅಣಿಗೊಳಿಸಲು ಕ್ರಿಯಾತ್ಮಕವಾಗಿ ವಿವಿಧ ನೆಲೆಗಳಲ್ಲಿ ನೆರವು ನೀಡಿರುವ ಕರ್ನಾಟಕ ಪಠ್ಯಪುಸ್ತಕ ಸಂಘದ ವ್ಯವಸ್ಥಾಪಕ ನಿರ್ದೇಶಕರು ಮತ್ತು ಉಪ ನಿರ್ದೇಶಕರು ಹಾಗೂ ಸಂಯೋಜಕರಾದ ಪ್ರೊ. ಜಿ.ಎಸ್. ಮುಡಂಬಡಿತ್ತಾಯ, ಕಾರ್ಯಕ್ರಮ ಸಂಯೋಜಕ ಹಾಗೂ ಹಿರಿಯ ಸಹಾಯಕ ನಿರ್ದೇಶಕರಾದ ಶ್ರೀ ಪಾಂಡುರಂಗ ಮತ್ತು ಪರಿಶೀಲಕ ಶ್ರೀ ಎ.ಬಿ.ಚಂದ್ರಶೇಖರ್ ಹಾಗೂ ಸಮಿತಿ ಸದಸ್ಯರು – ಇವರುಗಳನ್ನು ಕೃತಜ್ಞತೆಗಳಿಂದ ಸ್ಮರಿಸಿಕೊಳ್ಳುತ್ತೇನೆ. ಸಂಪಾದಕ ಮಂಡಳಿ ಸದಸ್ಯರ ಸೂಕ್ತ ಸಲಹೆ ಮಾರ್ಗದರ್ಶನಗಳಿಗೆ ನಾನು ವಿಶೇಷವಾಗಿ ಋಣಿಯಾಗಿದ್ದೇನೆ.

**– ಕೆ.ಎಸ್. ಮಧುಸೂದನ,**
ಅಧ್ಯಕ್ಷರು,
ತೃತೀಯ ಕನ್ನಡ – ೯
ಪಠ್ಯಪುಸ್ತಕ ರಚನಾ ಸಮಿತಿ

# ಪಠ್ಯಪುಸ್ತಕ ರಚನಾ ಸಮಿತಿ

*ಅಧ್ಯಕ್ಷರು:*

**ಪ್ರೊ. ಕೆ.ಎಸ್.ಮಧುಸೂದನ,** ನಿವೃತ್ತ ಪ್ರಿನ್ಸಿಪಾಲರು, ಎ.ಪಿ.ಎಸ್. ಕಲೆ ಮತ್ತು ವಿಜ್ಞಾನ ಪದವಿ ಕಾಲೇಜು, ಬೆಂಗಳೂರು–೧೯

*ಸದಸ್ಯರು:*

ಶ್ರೀ **ಎಂ.ಆರ್. ಸುರೇಶ,** ಬಿ.ಆರ್.ಪಿ., ಬಿ.ಆರ್.ಸಿ., ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ

ಶ್ರೀ **ಸಿ.ಬಿ. ವೀರಭದ್ರಾಚಾರಿ,** ಸ.ಶಿ., ಬಾಲಕರ ಪದವಿ ಪೂರ್ವ ಕಾಲೇಜು, ಮಾಲೂರು, ಕೋಲಾರ ಜಿಲ್ಲೆ

ಶ್ರೀ **ಅಸೀಫ್ ಅಹ್ಮದ್,** ಸ.ಶಿ., ದ ಸಿಟಿ ಅಕಾಡೆಮಿ, ಜಾಮ್ ಜಾಮ್ ಕಾಲೋನಿ, ರಿಂಗ್ ರೋಡ್, ಕಲಬುರಗಿ.

ಶ್ರೀ **ಸುಬ್ಬರಾಯ ಶರ್ಮ,** ಕನ್ನಡ ಭಾಷಾ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಸಜ್ಜಲೂರು, ಮಳವಳ್ಳಿ ತಾ॥ ಮಂಡ್ಯ ಜಿಲ್ಲೆ

ಶ್ರೀ **ರವಿಕುಮಾರ ಕೆ.ಎಂ.,** ಸ.ಶಿ., ಸರ್ಕಾರಿ ಪ್ರೌಢಶಾಲೆ, ಎಸ್. ಮಾದಾಪುರ, ಕಡೂರು ತಾ॥, ಚಿಕ್ಕಮಗಳೂರು ಜಿಲ್ಲೆ

ಶ್ರೀ **ಸುಂದರ ತೋಡಾರ್,** ಚಿತ್ರಕಲಾ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಗೋಳ್ತಮಜಲು, ಬಂಟ್ವಾಳ ತಾ॥ ದ.ಕ.

*ಪರಿಶೀಲಕರು:*

ಶ್ರೀ **ಎ.ಬಿ.ಚಂದ್ರಶೇಖರ್,** ಪ್ರಾಧ್ಯಾಪಕರು, ಶ್ರೀ ಆದಿಚುಂಚನಗಿರಿ ಶಿಕ್ಷಣ ಮಹಾವಿದ್ಯಾಲಯ, ಚನ್ನರಾಯಪಟ್ಟಣ, ಹಾಸನ ಜಿಲ್ಲೆ.

*ಸಂಪಾದಕ ಮಂಡಳಿ ಸದಸ್ಯರು:*

**ಪ್ರೊ. ಚಂದ್ರಶೇಖರ ಪಾಟೀಲ್,** ಸಾಹಿತಿಗಳು, ಸಂಕ್ರಮಣ ಪ್ರಕಾಶನ, ಎಲಚೇನಹಳ್ಳಿ, ಜೆ.ಪಿ. ನಗರ , ಬೆಂಗಳೂರು–೭೮

**ಡಾ. ಕೆ. ಮರುಳಸಿದ್ದಪ್ಪ,** ಸಾಹಿತಿಗಳು, ನಂ ೧೩೭, ೧೨ನೇ ಕ್ರಾಸ್, ಜೆ.ಪಿ. ನಗರ, ಬೆಂಗಳೂರು–೭೮

**ಪ್ರೊ. ಸಾ.ಶಿ. ಮರುಳಯ್ಯ,** ಸಾಹಿತಿಗಳು, ರಾಗಿಣಿ, ಹಂಪಿನಗರ, ಬೆಂಗಳೂರು.

**ಪ್ರೊ. ಅ.ರಾ.ಮಿತ್ರ,** ಸಾಹಿತಿಗಳು, ಕೆ.ಎಚ್.ಬಿ. ಕಾಲೋನಿ, ಯಲಹಂಕ, ಬೆಂಗಳೂರು.

**ಡಾ. ವಿಷ್ಣು ಎಂ. ಶಿಂದೆ,** ಸಹಾಯಕ ಪ್ರಾಧ್ಯಾಪಕರು, ಶಿಕ್ಷಣ ವಿಭಾಗ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯ, ವಿಜಯಾಪುರ.

*ಮುಖ್ಯ ಸಂಯೋಜಕರು:*

**ಪ್ರೊ. ಜಿ.ಎಸ್.ಮುಡಂಬಡಿತ್ತಾಯ,** ಪಠ್ಯಕ್ರಮ ಪರಿಷ್ಕರಣೆ ಮತ್ತು ಪಠ್ಯ ಪುಸ್ತಕ ರಚನೆ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು – ೫೬೦ ೦೮೫

*ಸಲಹೆ ಮತ್ತು ಮಾರ್ಗದರ್ಶನ:*

ಶ್ರೀ **ನಾಗೇಂದ್ರ ಕುಮಾರ್,** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು – ೮೫.

ಶ್ರೀ **ಪಾಂಡುರಂಗ,** ಉಪನಿರ್ದೇಶಕರು (ಪ್ರಭಾರಿ), ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು – ೫೬೦ ೦೮೫

*ಕಾರ್ಯಕ್ರಮ ಸಂಯೋಜಕರು:*

ಶ್ರೀ **ಪಾಂಡುರಂಗ,** ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು – ೮೫

# ಅನುಕ್ರಮಣಿಕೆ

# ೧. ಬೆಳಗು ಜಾವ

– ದ. ರಾ. ಬೇಂದ್ರೆ

**ಪ್ರವೇಶ ಮತ್ತು ಆಶಯ :**

ಹೊಸಗನ್ನಡ ಸಾಹಿತ್ಯದ ಇತಿಹಾಸದಲ್ಲಿ ನವೋದಯ ಕಾಲದ ಸಾಹಿತ್ಯ ತನ್ನದೇ ಆದ ವೈಶಿಷ್ಟ್ಯಗಳಿಂದ ಕೂಡಿದೆ. ಈ ಕಾಲದ ಮಹತ್ವದ ಕವಿಗಳಲ್ಲಿ ಬೇಂದ್ರೆಯವರು ಒಬ್ಬರು. ಬೇಂದ್ರೆಯವರ ಭಾವಗೀತೆಗಳು ಸಮಗ್ರ ಬದುಕಿನ ಭಂಡಾರವಾಗಿವೆ. ಇವರ ಕಾವ್ಯಗಳಲ್ಲಿ ಪ್ರಕೃತಿ ವರ್ಣನೆ ಕೇವಲ ವರ್ಣನೆಯಲ್ಲ. ಅದು ಬದುಕಿನೊಂದಿಗೆ ಮಿಳಿತವಾಗಿರುವ ಚೈತನ್ಯದ ಶಕ್ತಿಯಾಗಿದೆ. ಈ ಹಿನ್ನೆಲೆಯಲ್ಲಿ 'ಬೆಳಗುಜಾವ' ಕವನ ಮಹತ್ವದ್ದಾಗಿದೆ.

'ಬೆಳಗುಜಾವ' ಕವನವು ದಿನದ ಬೆಳಗನ್ನು ವರ್ಣಿಸುವ ಪದ್ಯ. ಬೆಳಕಿಗೆ ಮನ್ಮಥ ಮತ್ತು ಬೇಟೆಗಾರರ ಉದಾಹರಣೆ ಕೊಡಲಾಗಿದೆ. ಪ್ರಾತಃಕಾಲದಲ್ಲಿ ನಿದ್ದೆ ಮಾಡುವ ತಾಮಸಿಗಳಾಗದೆ ಚೈತನ್ಯವುಳ್ಳ ಸಾತ್ವಿಕರಾಗಿ ಬೆಳಕಿನಲ್ಲಿ ಕಾರ್ಯತತ್ಪರರಾಗಿರಿ ಎಂದು ಎಚ್ಚರಿಸಲಾಗಿದೆ.

ಯೌವ್ವನದ ಸುಗ್ಗಿ ಜೀವಮಾನದಲ್ಲಿ ಒಮ್ಮೆ ಮಾತ್ರ ಬರುವಂಥದ್ದು. ಆದುದರಿಂದ ಅದರ ಸದುಪಯೋಗವನ್ನು ಮಾಡಿಕೊಳ್ಳಬೇಕು ಎಂಬ ಆಶಯವನ್ನು ಕವಿ ಇಲ್ಲಿ ವಕ್ತಪಡಿಸಿದ್ದಾರೆ.





ಏಳು ಚಿನ್ನ, ಬೆಳಗಾಯ್ತು ಅಣ್ಣ, ಮೂಡಲವು ತೆರೆಯೆ ಕಣ್ಣ,
ನಕ್ಷತ್ರ ಜಾರಿ ತಮವೆಲ್ಲ ಸೋರಿ, ಮಿಗಿಲಹುದು ಬಾನ ಬಣ್ಣ,
ಜೇನ್ನೊಣದ ಹೆದೆಗೆ ಹೂಬಾಣ ಹೂಡಿ ಝುಂ ಎಂದು ಬಿಟ್ಟ ಮಾರ.
ಗುಡಿಗೋಪುರಕ್ಕು ಬಲೆ ಬೀಸಿ ಬಂದ ಅಗೊ ಬೆಳಕು-ಬೇಟಗಾರ ॥ ೧ ॥

ನಿಶೆಯಿಳಿದ ಉಷೆಯ ಎಳನಗೆಯ ಬಗೆಗೆ ಸೋತಿರಲು ಜಗವು ಸವಿಗೆ
ಕಣ್ಣೆದಿರು ಬಂದು ಕಟ್ಟಿತ್ತು ಕನಸು; ಕೂಗೊಂದು ಬಂತು ಕಿವಿಗೆ:
ಮಕ್ಕಳಿರ ಕೇಳಿ. ರಸ ಕುಡಿಯಲೇಳಿ, ಹುಸಿನಿದ್ದೆಗಿದ್ದೆ ಸಾಕು.
ಈ ತುಂಬಿಬಾಳು ತುಂಬಿರುವ ತನಕ ತುಂತುಂಬಿ ಕುಡಿಯಬೇಕು ॥ ೨ ॥

ಯಾವಾಗೊ ಕೋಳಿ ಕೂಗಿಹುದು ಏಳಿ, ತಡವೇಕೆ ಪಾನಕೇಳಿ.
ಮೊದಲಾಗಲೀಗ, ಅಂಗಡಿಯ ಕದವ ಈ ಕ್ಷಣಕೆ ತೆರೆಯ ಹೇಳಿ.
ಜೀವನದ ನದಿಗೆ ಸೆಳವಿಹುದು. ಮರಣ ಬಂದೀತು ಕ್ಷಣವು ಮರಳಿ
ಹೋದವರು ತಿರುಗಿ ಬಂದಾರೆ, ಅವರು ಬರಲಿಕ್ಕು ಇಲ್ಲ ಮರಳಿ ॥ ೩ ॥

ಬಾನ್ ಹೊಗರಲುಂಟು, ಮರ ಚಿಗುರಲುಂಟು, ಬರಲುಂಟೆ ಸುಗ್ಗಿ ಮತ್ತೆ?
ಮುಳುಗಿರಲಿ ಮುಪ್ಪು ಚಿಂತನದಿ ತಾನು ಹರೆಯಕ್ಕೆ ಬೇರೆ ಹೊತ್ತೆ? ॥ ೪ ॥



## ಕವಿ – ಕಾವ್ಯ ಪರಿಚಯ :



'ಅಂಬಿಕಾತನಯದತ್ತ' ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದ ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರು ಕ್ರಿ.ಶ.೧೮೯೬ ಜನವರಿ ೩೧ರಂದು ಧಾರವಾಡದಲ್ಲಿ ಜನಿಸಿದರು. ಇವರ ತಂದೆ ರಾಮಚಂದ್ರ ಪಂತರು (ತಾತಂಭಟ್ಟ ಎಂದೂ ಅವರನ್ನು ಕರೆಯುತ್ತಿದ್ದರು). ತಾಯಿ ಅಂಬೂತಾಯಿ (ಅಂಬಿಕೆ). ಇವರು ನವೋದಯ ಕಾಲದ ಮಹತ್ವದ ಕವಿಗಳಲ್ಲಿ ಒಬ್ಬರು. ಗರಿ, ಸಖೀಗೀತ, ಗಂಗಾವತರಣ, ನಾದಲೀಲೆ ಮುಂತಾದವು ಇವರ ಪ್ರಸಿದ್ಧ ಕವನ ಸಂಕಲನಗಳು. ಇವರ 'ಅರಳು-ಮರಳು' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಹಾಗೂ 'ನಾಕುತಂತಿ' ಕೃತಿಗೆ ಜ್ಞಾನಪೀಠ ಪ್ರಶಸ್ತಿ ದೊರೆತಿದೆ. ಇವರು ವಿಮರ್ಶೆ, ನಾಟಕ, ಅನುವಾದ ಕ್ಷೇತ್ರಗಳಲ್ಲೂ ಕೃಷಿ ಮಾಡಿದ್ದಾರೆ. ೧೯೮೧ ಅಕ್ಟೋಬರ್ ೨೬ ರಂದು ಬೇಂದ್ರೆಯವರು ಇಹಲೋಕ ತ್ಯಜಿಸಿದರು.

ಇದು ಒಂದು ಸಾನೆಟ್. ಸಾನೆಟ್ ಇಂಗ್ಲಿಷ್ ಭಾಷೆಯಿಂದ ಕನ್ನಡಕ್ಕೆ ಬಂದ ಪದ್ಯ ರೂಪ. ಇದರಲ್ಲಿ ೧೪ ಸಾಲುಗಳಿರುತ್ತದೆ. ಇದನ್ನು ಕನ್ನಡದಲ್ಲಿ 'ಸುನೀತ' ಎಂದು ಕರೆಯುತ್ತಾರೆ. ಪ್ರಸ್ತುತ ಕವಿತೆಯನ್ನು 'ವಿನಯ' ಕವನ ಸಂಕಲನದಿಂದ ಆರಿಸಿದೆ.

**ಓದಿ ತಿಳಿಯಿರಿ:**

ಮೂಡಲು – ಸೂರ್ಯ ಮೂಡುವ ದಿಕ್ಕು, ಪೂರ್ವ
ನಕ್ಷತ್ರ ಜಾರಿ – ರಾತ್ರಿ ಕಳೆದು
ತಮ – ಕತ್ತಲು
ಮಿಗಿಲು – ಹೆಚ್ಚು
ಬಾನು – ಆಕಾಶ
ಮಾರ – ಮನ್ಮಥ
ಬೆಳಕು ಬೇಟೆಗಾರ – ಸೂರ್ಯ
ನಿಶೆ – ರಾತ್ರಿ, ಮಂಪರು
ಉಷೆ – ಮುಂಬೆಳಗು, ಮುಂಜಾವು
ಜಗ – ಜಗತ್ತು, ಪ್ರಪಂಚ, ವಿಶ್ವ, ಲೋಕ
ರಸ – ಅನುಭವದ ಸವಿ, ಸಾರ
ಹುಸಿನಿದ್ದೆ – ಆಲಸ್ಯದ ವಿಶ್ರಾಂತಿ, ಸುಳ್ಳುನಿದ್ರೆ
ಪಾನಕೇಳಿ – ಪಾನೀಯ ಕುಡಿಯುವುದಕ್ಕೆ ಎದ್ದೇಳಿ, ಪಾನಕೆ + ಏಳಿ
ಕದ – ಬಾಗಿಲು
ಹೋದವರು – ಮರಣ ಹೊಂದಿದವರು
ಮರಳಿ – ಮತ್ತೆ, ಹಿಂದಿರುಗಿ
ಹೊಗರು – ಕಾಂತಿ
ಚಿಂತನ – ಯೋಗ್ಯಯೋಚನೆ
ಹರೆಯ – ಹದಿವಯಸ್ಸು, ಯೌವ್ವನ, ಪ್ರಾಯ
ಹೊತ್ತು – ಸಮಯ, ಗಳಿಗೆ, ವೇಳೆ



## ಅಭ್ಯಾಸ

**ಅ. ಸೂಕ್ತ ಪದವನ್ನು ಆವರಣದಿಂದ ಆರಿಸಿ ಬರೆಯಿರಿ:**

೧. ಮೂಡಲವು __________ ಕಣ್ಣ
(ತೆರೆಯೆ, ಮುಚ್ಚೆ, ನೇರ, ಕಾಣದ)

೨. ________ ಉಷೆಯ ಎಳನಗೆಯ ಬಗೆಗೆ ಸೋತಿರಲು ಜಗವು ಸವಿಗೆ
(ಬೆಳಗಾದ, ಮಂಪರಿನ, ನಿಶೆಯಿಳಿದ, ತಂಗಾಳಿ)

೩. ಯಾವಾಗೊ ಕೋಳಿ ಕೂಗಿಹುದು ಏಳಿ, ತಡವೇಕೆ ________
(ನಿದ್ದೆಯಿಂದೇಳಿ, ಪಾನಕೇಳಿ, ಮಲಗಿ, ಬೇಗಬನ್ನಿ)

೪. ಮುಳುಗಿರಲಿ ಮುಪ್ಪು ಚಿಂತನದಿ ತಾನು _______ ಬೇರೆ ಹೊತ್ತೇ?
(ಹರ್ಷಕ್ಕೆ, ಮುದಿತನಕೆ, ಬಾಲ್ಯಕ್ಕೆ, ಹರೆಯಕ್ಕೆ)

**ಆ. ಈ ಪದಗಳನ್ನು ಸ್ವಂತ ವಾಕ್ಯಗಳಲ್ಲಿ ಬರೆಯಿರಿ:**

೧. ಬೆಳಗಾಯ್ತು

೨. ಹೂಬಾಣ

೩. ಹಸಿನಿದ್ದೆ

೪. ಬಲೆಬೀಸು

**ಇ. ಹೊಂದಿಸಿ ಬರೆಯಿರಿ:**

| ಅ | ಆ |
|---|---|
| ೧. ಏಳು ಚಿನ್ನ | ೧. ರಸ ಕುಡಿಯಲೇಳಿ |
| ೨. ಮಕ್ಕಳಿರ ಕೇಳಿ | ೨. ಮರ ಚಿಗುರಲುಂಟು |
| ೩. ಯಾವಾಗೋ ಕೋಳಿ | ೩. ಬೆಳಗಾಯ್ತು ಅಣ್ಣ |
| ೪. ಬಾನ್ ಹೊಗರಲುಂಟು | ೪. ಕೂಗಿಹುದು ಏಳಿ |

**ಈ. ಈ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ:**

೧. ನಕ್ಷತ್ರ ಜಾರಿ, ತಮವೆಲ್ಲ ಸೋರಿಹುದು ಯಾವಾಗ?

೨. ಜೇನ್ನೊಣದ ಹೆದೆಗೆ ಹೂಬಾಣ ಹೂಡಿದವನು ಯಾರು?

೩. ಜಗವು ಯಾವುದಕ್ಕೆ ಸೋತಿತು?

೪. ಏನನ್ನು ನಾವು ತುಂತುಂಬಿ ಕುಡಿಯಬೇಕು?

೫. ಯಾರು ಮರಳಿ ಬರುವುದಿಲ್ಲ?

೬. ಮುಪ್ಪು ಯಾವುದರಲ್ಲಿ ಮುಳುಗಿರುತ್ತದೆ?



**ಉ. ಈ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ:**

೧. ಬೆಳಕೆಂಬ ಬೇಟೆಗಾರ ಬಂದಾಗ ಪ್ರಕೃತಿಯಲ್ಲಿ ಆದ ಬದಲಾವಣೆ ಯಾವುದು?

೨. ಜೀವನದ ಸವಿಯನ್ನು ಸವಿಯಲು ತಡಮಾಡಬಾರದು, ಏಕೆ?

**ಊ. ಈ ಪ್ರಶ್ನೆಗೆ ಐದು / ಆರು ವಾಕ್ಯಗಳಲ್ಲಿ ಉತ್ತರಿಸಿರಿ:**

೧. 'ಬೆಳಗುಜಾವ' ಪದ್ಯದ ಸಾರಾಂಶವನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ.

**೫. ಸಂದರ್ಭದೊಡನೆ ವಿವರಿಸಿ:**

೧. ಈ ತುಂಬಿಬಾಳು ತುಂಬಿರುವ ತನಕ ತುಂತುಂಬಿ ಕುಡಿಯಬೇಕು.

೨. ಜೇನ್ನೊಣದ ಹೆದೆಗೆ ಹೂಬಾಣ ಹೂಡಿ ಝುಂ ಎಂದು ಬಿಟ್ಟ ಮಾರ.

೩. ಜೀವನದ ನದಿಗೆ ಸೆಳೆವಿಹುದು

೪. ಮುಳುಗಿರಲಿ ಮುಪ್ಪು ಚಿಂತನದಿ ತಾನು ಹರೆಯಕ್ಕೆ ಬೇರೆ ಹೊತ್ತೆ?

## ಭಾಷಾಭ್ಯಾಸ

**ಅ. ಸಂಸ್ಕೃತ – ತದ್ಭವ ರೂಪ ಬರೆಯಿರಿ:**

೧. ಬಣ್ಣ  ೨. ಕ್ಷಣ  ೩. ಹರೆಯ

**ಆ. ವಿರುದ್ಧಾರ್ಥಕ ಪದ ಬರೆಯಿರಿ:**

೧. ಏಳು  ೨. ಬೆಳಕು  ೩. ಸರಸ  ೪. ಸಹಕಾರ

**ಇ. ಈ ಕೆಳಗಿನ ಪದಗಳಿಗೆ ಸ್ತ್ರೀಲಿಂಗ ರೂಪ ಬರೆಯಿರಿ:**

೧. ಯುವಕ  ೨. ಮಹಾರಾಜ  ೩. ಗೆಳೆಯ  ೪. ಸಚಿವ



## ಚಟುವಟಿಕೆ

೧. ಈ ಪದ್ಯದಲ್ಲಿ ಬರುವ ಅಂತ್ಯಪ್ರಾಸ ಪದಗಳನ್ನು ಪಟ್ಟಿ ಮಾಡಿ.

೨. ಈ ಪದ್ಯವನ್ನು ರಾಗವಾಗಿ ಹಾಡಿರಿ.

೩. ಕವಿತೆಯ ಮೊದಲನೆಯ ಚರಣವನ್ನು ಕಂಠಪಾಠ ಮಾಡಿರಿ.

೪. ಕನ್ನಡದಲ್ಲಿ ಜ್ಞಾನಪೀಠ ಪ್ರಶಸ್ತಿ ಪಡೆದಿರುವ ಸಾಹಿತಿಗಳ ಮಾಹಿತಿಯನ್ನು ಸಂಗ್ರಹಿಸಿರಿ.

# ೨. ಅರಳಿ ಕಟ್ಟೆ

**–ಬಿ.ಜಿ.ಎಲ್. ಸ್ವಾಮಿ**

**ಪ್ರವೇಶ ಮತ್ತು ಆಶಯ :** ಕನ್ನಡ ಸಾಹಿತ್ಯದಲ್ಲಿ ಹಲವಾರು ಪರಿಸರ ಅಧ್ಯಯನದ ಕೃತಿಗಳು ಪ್ರಕಟಗೊಂಡಿವೆ. 'ಹಸುರು ಹೊನ್ನು' ಒಂದು ಅಮೂಲ್ಯಕೃತಿ. ಹಲವಾರು ಕಾಡುಗಳಲ್ಲಿನ ಅತ್ಯಮೂಲ್ಯ ಸಸ್ಯ ಪ್ರಭೇದಗಳ ವೈಜ್ಞಾನಿಕ ಮಾಹಿತಿ ಈ ಕೃತಿಯಲ್ಲಿದೆ. ಕೆಲವು ಗಿಡಮರಗಳು ನಮ್ಮ ಸಮೀಪದಲ್ಲಿದ್ದರೂ ಅವುಗಳ ಉಪಯೋಗ, ಗುಣ, ಲಕ್ಷಣಗಳು ನಮ್ಮ ಅರಿವಿಗೆ ಬಾರದಿರಬಹುದು. ಎಷ್ಟೋ ಗಿಡ ಮೂಲಿಕೆಗಳು ಅತ್ಯಮೂಲ್ಯವಾಗಿದ್ದರೂ ಅವು ಅನುಪಯುಕ್ತವಾಗಿ ಅಳಿವಿನ ಅಂಚಿನಲ್ಲಿವೆ. ಅಶ್ವತ್ಥ ವೃಕ್ಷವನ್ನು ಅರಳಿಮರ, ಬೋಧಿವೃಕ್ಷವೆಂತಲೂ ಕರೆಯುವರು. ಮಾನವನ ಒಡನಾಡಿಯಾಗಿ ಅಶ್ವತ್ಥ ಮರ ಅನಾದಿಕಾಲದಿಂದಲೂ ಉಪಯೋಗದಲ್ಲಿದೆ. ಈ ಮರವನ್ನು "ಆಮ್ಲಜನಕದ ಬ್ಯಾಂಕ್" ಎಂದು ಕರೆಯುವರು. ನಮ್ಮ ಪೂರ್ವಜರು ಈ ಮರದ ಗುಣವನ್ನು ಅರಿತೇ ಪ್ರತಿ ಒಂದು ಗ್ರಾಮದ ಮುಂದೆ ಅಶ್ವತ್ಥಕಟ್ಟೆಯನ್ನು ಕಟ್ಟಿ, ಅರಳಿ ಮರದ ಜೊತೆಗೆ ಬೇವಿನ ಮರವನ್ನು ಬೆಳಸಿ ಸುತ್ತಲೂ ಕಟ್ಟೆಕಟ್ಟಿ ನಾಗರಕಲ್ಲು ಪ್ರತಿಷ್ಠಾಪಿಸಿ ಪೂಜ್ಯ ಭಾವನೆಯಿಂದ ಪೂಜಿಸುತ್ತಿದ್ದರು. ಅರಳಿ ಮರದ ಎಲೆಗಳನ್ನು ಆಡು, ಹಸು, ಎಮ್ಮೆಗಳು ತಿನ್ನುತ್ತವೆ. ಹಣ್ಣುಗಳನ್ನು ಹತ್ತಾರು ಪಕ್ಷಿಗಳು ತಿನ್ನುತ್ತವೆ. ಪಕ್ಷಿಗಳು ಗೂಡುಕಟ್ಟಿ ವಾಸ ಮಾಡುತ್ತವೆ. ಅಲ್ಲದೆ ನೂರಾರು ಕ್ರಿಮಿ–ಕೀಟಗಳ ವಾಸಸ್ಥಾನವೂ ಹೌದು.

ನಾಡು, ನುಡಿ, ನೀರು, ಸ್ವಾತಂತ್ರ್ಯ, ಸಂಸ್ಕೃತಿ ಮತ್ತು ಪರಂಪರೆಯ ಉಳಿವಿಗಾಗಿ ಆತ್ಮಾರ್ಪಣೆಗೈದ ಹಲವಾರು ಜನರ ತ್ಯಾಗದ ಫಲವನ್ನು ನಾವು ಇಂದು ಉಣ್ಣುತ್ತಿದ್ದು, ನಾವೂ ಉದಾತ್ತ ಗುಣಗಳನ್ನು ನಮ್ಮ ಬದುಕಿನಲ್ಲಿ ಅಳವಡಿಸಿಕೊಂಡು ಸಾರ್ಥಕ ಬದುಕನ್ನು ಬದುಕಬೇಕು.

ಬಹು ಉಪಯುಕ್ತವಾದ ಅರಳಿ ಮರವನ್ನು ನೆಟ್ಟು ಬದುಕಿನ ಸಾರ್ಥಕತೆಯನ್ನು ಕಂಡುಕೊಂಡ ಹೃದಯ ಶ್ರೀಮಂತಿಕೆ ಮೆರೆದ ಕಡು ಬಡತನದ ಶೇಷಪ್ಪನ ಯಶೋಗಾಥೆಯೆ ಪ್ರಸ್ತುತ ಗದ್ಯದ ತಿರುಳು. ಇಂತಹ ಸಾರ್ಥಕ ಬದುಕನ್ನು ಬದುಕಬೇಕು ಎಂಬುದು ಲೇಖಕರ ಆಶಯ.



ನನ್ನ ಚಿಕ್ಕಂದಿನಲ್ಲಿ ನಮ್ಮ ಮನೆಗೊಬ್ಬ ವೃದ್ಧರು ಬರುತ್ತಿದ್ದರು. ವಯಸ್ಸು ೭೫–೮೦ ಇರಬಹುದು; ಕೃಶವಾದ ದೇಹ, ಕುಳಿಬಿದ್ದ ಕಣ್ಣು, ದೃಷ್ಟಿಮಾಂದ್ಯ, ಕಿವಿಯಂತೂ ಎಷ್ಟೋ ವರ್ಷಗಳ ಹಿಂದೆಯೇ ತನ್ನ ಕಾರ್ಯದಿಂದ ರಿಟೈರ್ ಆಗಿ ಬಿಟ್ಟಿತ್ತು. ಕೈಯಲ್ಲಿ ಕೋಲು ಹಿಡಿಯದೆ ಒಂದು ಹೆಜ್ಜೆಯನ್ನೂ ಇಡುವಂತಿರಲಿಲ್ಲ. ನಿತ್ಯ ಭಿಕ್ಷೆಯಿಂದ ಜೀವನ. ಇಳಿ ವಯಸ್ಸಿನಲ್ಲಿ ಇವರನ್ನು ನೋಡಿಕೊಳ್ಳುವವರಾರೂ ಇರಲಿಲ್ಲ. ಶೇಷಪ್ಪ ಎಂದೇನೋ ಹೆಸರು. ಈತನಿಗಿದ್ದದ್ದು ಒಂದೇ ಒಂದು ಆಸೆ, ಉತ್ಕಟವಾದ ಆಸೆ. ಕಣ್ಣುಮುಚ್ಚುವುದರೊಳಗಾಗಿ ನೆರವೇರಿಸಬೇಕೆಂಬ ಆಸೆ. ಅಶ್ವತ್ಥ ಪ್ರತಿಷ್ಠೆ, ಪ್ರತಿಷ್ಠೆಯಾದ ಮರಕ್ಕೊಂದು ಕಟ್ಟೆಕಟ್ಟುವುದು. ಈ ಎರಡು ಕರ್ತವ್ಯಗಳ ಹೊರೆ ಅವರ ಹೆಗಲ ಮೇಲೆ ಭಾರವಾಗಿ ಹೇರಿಕೊಂಡಿದ್ದು ಬಹಳ ತೊಂದರೆ ಕೊಡುತ್ತಿದ್ದವಂತೆ. ಈ ಕಾರ್ಯಕ್ಕಾಗಿ ಅವರು ಉದ್ದೇಶಿಸಿದ್ದ ಪ್ರದೇಶ ಬಸವನಗುಡಿಯಲ್ಲಿರುವ (ಬೆಂಗಳೂರು) ಮಲ್ಲಿಕಾರ್ಜುನಸ್ವಾಮಿ ಗುಡಿಯ ಮುಂಭಾಗ. ಅದು ಸರ್ಕಾರಕ್ಕೋ ಕಾರ್ಪೋರೇಷನ್ನಿಗೋ ಸೇರಿದ್ದು. ಕಟ್ಟೆ ಹಾಕುವುದಕ್ಕೆ ಈ ಸಂಸ್ಥೆಗಳವರು ಏನೋ ತಕರಾರು ಎತ್ತಿದ್ದರು. ವೃದ್ಧರ ಯತ್ನಕ್ಕೆ ವಿಘ್ನಗಳನ್ನು ಒಡ್ಡಿದ್ದರು. ಇದರ ವಿಷಯವಾಗಿ



ಮಾತುಕತೆಯಾಡಿಕೊಂಡು ಹೋಗುವುದಕ್ಕೆ ನನ್ನ ತಂದೆಯವರ ಬಳಿ ಬರುತ್ತಿದ್ದರು. ಕೊನೆಗೊಂದು ದಿನ ವಿಘ್ನಗಳು ನಿವಾರಣೆಯಾದವು. ಪ್ರಶಸ್ತ ದಿನವೊಂದರಲ್ಲಿ ಕಾರ್ಯಗಳನ್ನು ಮುಗಿಸಿದರು. ಬೆಳಗ್ಗೆ ಸುಮಾರು ೧೧ ಗಂಟೆ ಸಮಯಕ್ಕೆ ವೃದ್ಧರು ಮನೆಗೆ ಬಂದರು. ತಂದೆಯವರು ಹೊರಗೆ ಹೋಗಿದ್ದರು. ವೃದ್ಧರು ಕೈಲಿ ಹಿಡಿದು ತಂದಿದ್ದ ತಾಮ್ರದ ಪಂಚಪಾತ್ರೆ, ಉದ್ಧರಣೆ, ಒಂದು ಬಾಳೆಹಣ್ಣು, ಎರಡು ಸೇವಂತಿಗೆ ಹೂ, ಒಂದು 'ಅನಂತ ವಸ್ತ್ರ' ಇವುಗಳನ್ನು ನನ್ನ ಸೋದರತ್ತೆಯವರ ಕೈಲಿಟ್ಟು "ಇವುಗಳನ್ನು ಯಜಮಾನರಿಗೆ ತಲುಪಿಸಿಬಿಡಿ. ಕಾರ್ಯ ನನ್ನ ಉದ್ದೇಶಕ್ಕೆ ತಕ್ಕಂತೆ ನೆರವೇರಿತು. ನನ್ನ ಋಣ ತೀರಿತು. ಯಜಮಾನರ ನೆರವಿಲ್ಲದೆ ಹೋಗಿದ್ದಿದ್ದರೆ ನನ್ನ ಋಣದ ಗಂಟನ್ನು ಹೊತ್ತುಕೊಂಡೇ ಕಣ್ಮುಚ್ಚಬೇಕಾಗಿದ್ದಿತು. ಈಗ ನನಗೆ ಯಾವ ಭಯವೂ ಇಲ್ಲ. ನಿಶ್ಚಿಂತೆಯಿಂದ ಮುಂದನ್ನು ಎದುರು ನೋಡುತ್ತಿದ್ದೇನೆ. ಇನ್ನೊಂದು ಸಲ ಬಂದು ಯಜಮಾನರಿಗೆ ಸಾಷ್ಟಾಂಗ ಬೀಳುತ್ತೇನೆ. ದಯವಿಟ್ಟು ತಿಳಿಸಿಬಿಡಿ" ಎಂದು ಹೊರಡಲು ಉದ್ಯುಕ್ತರಾದರು. ಸೋದರತ್ತೆ "ಒಂದಿಷ್ಟು ಹಾಲು ಕುಡಿದು ಹೋಗಬೇಕು" ಎಂದರು.

"ಇಲ್ಲಮ್ಮ, ಇವತ್ತು ನಾಲ್ಕು ಜನಕ್ಕೆ ಭೋಜನ ಬಡಿಸಬೇಕು. ಅವರದಾದ ಬಳಿಕವೇ ನನ್ನದು. ನಾಲ್ಕೈದು ಮನೆಗಳಿಗೆ ಹೋಗಿ ಭಿಕ್ಷೆ ತೆಗೆದುಕೊಳ್ಳಬೇಕು. ಆಮೇಲೆ ಅಡುಗೆ ಮಾಡಬೇಕು. ಅನ್ನಶಾಂತಿಗೆ ಬರುವವರನ್ನು ನಾನು ಕಾಯಿಸಬಾರದಮ್ಮ."

"ಅಕ್ಕಿ ಬೇಳೆ ಸಾಮಗ್ರಿಗಳನ್ನು ನಮ್ಮ ಮನೆಯಿಂದಲೇ ಕೊಡುತ್ತೇನೆ."

"ಬೇಡಮ್ಮ, ನಾಲ್ಕು ಬಾಗಿಲಲ್ಲಿ ನಿಂತು ಯಾಚಿಸುವುದು ನನಗೆ ರಕ್ತಗತವಾಗಿಬಿಟ್ಟಿದೆ. ಇಂದೇಕೆ ಅದನ್ನು ತಪ್ಪಿಸಲಿ?" ಎಂದು ಹೊರಟುಹೋದರು.

ನನ್ನ ಬಾಲ್ಯದ ಬುದ್ಧಿಗೆ "ಈ ಮುದುಕ ಯಾಚನೆಯಿಂದ ಜನರನ್ನು ತೊಂದರೆಗೀಡುಮಾಡಿ, ಮರ ನೆಟ್ಟು ಜಗುಲಿ ಕಟ್ಟಿಸದೆ ಹೋಗಿದ್ದರೆ ಯಾರು ಅಳುತ್ತಿದ್ದರು?" ಎನ್ನಿಸಿದ್ದೇನೋ ನಿಜ. ಕಾಲಕ್ರಮೇಣದಲ್ಲಿ ಶೇಷಪ್ಪನಂಥ ಮಹಾನುಭಾವರಿಗೆಲ್ಲ ಮನಸ್ಸಿನಲ್ಲಿಯೇ ಎಷ್ಟೋ ಸಲ ಮಣಿದಿದ್ದೇನೆ. ಕೃತಜ್ಞತೆ ಅರ್ಪಿಸಿದ್ದೇನೆ. ಅವರ ಜೀವಿತದಲ್ಲಿ ಯಾವುದೋ ಒಂದು – ತಮ್ಮ ಸ್ವಧರ್ಮ ದೃಷ್ಟಿಯಲ್ಲಿ ಸರಿಯೆಂದು ಪ್ರೇರಿತವಾದ ಯಾವುದೋ ಒಂದು – ಉದ್ದೇಶವನ್ನು ಕಂಡುಕೊಂಡು, ಅದನ್ನು ತನ್ನ ಋಣ ತೀರಿಸುವ ಕರ್ತವ್ಯವೆಂದು ಬಗೆದು, ತದೇಕಚಿತ್ತತೆಯಿಂದ ಅದರ ಸಾಧನೆಯಲ್ಲಿ ತೊಡಗಿ, ಪೂರೈಸಿ ಕೃತಕೃತ್ಯರಾದವರು ಮಹಾನುಭಾವರು ಎಂದು ನನ್ನ ತಿಳುವಳಿಕೆ. ಇಂಥವರ ಸತತವಾದ ನಿಷ್ಠೆಯಿಂದಲೇ ಬೀದಿಗೊಂದು ಹಳ್ಳಿಗೊಂದು ಅಶ್ವತ್ಥಕಟ್ಟೆ ತಲೆಯೆತ್ತಿದೆ.

ಅಶ್ವತ್ಥ ಬರಿಯ ಮರವಲ್ಲ, ಕಟ್ಟೆ ಯಾವುದೋ ಕಟ್ಟೆಯಲ್ಲ. ಇವೆರಡೂ ಜನ ಜೀವನದಲ್ಲಿ ಬಹುಕಾಲದಿಂದ ಒಂದಾಗಿಬಿಟ್ಟಿವೆ. ಹಳ್ಳಿಯ ಸಾರ್ವಜನಿಕ ಸಮಾರಂಭಗಳು ಅಶ್ವತ್ಥ ಮರದಡಿಯಲ್ಲಿ ನಡೆಯುತ್ತವೆ. ಪಂಚಾಯಿತಿಗಳಿಗೆ ಅಶ್ವತ್ಥಮರ ಛಾವಣಿ, ಕಟ್ಟೆಯೇ ನೆಲಹಾಸು; ಮದುವೆ ಮುಂಜಿಗಳಿಗೆ ಪ್ರಶಸ್ತವಾದ, ಪವಿತ್ರವಾದ ಕಲ್ಯಾಣ ಮಂಟಪ; ಪ್ರವಾಸಿಗಳಿಗೂ ಯಾತ್ರಾರ್ಥಿಗಳಿಗೂ ಆದರವೀಯುವ ಸತ್ರ; ಮಕ್ಕಳ ಆಟ, ಓಟ, ಪಾಠಗಳಿಗೆ ಕಾಪು: ಹಿರಿಯರ ಗಾಳಿ ಸೇವನೆಗೂ ವಿಚಾರ ವಿನಿಮಯಕ್ಕೂ ಒಪ್ಪುವ ಆಶ್ರಯ. ಬೀದಿ ಮಾತಿಗೂ ಕಾಡು ಹರಡೆಗೂ ಕೀಟಲೆ ಕೋಟಲೆಗಳಿಗೂ ಮಾತೃ ಸ್ಥಾನವಾಗಿಯೂ ರೂಪುಗೊಂಡಿದೆ.



**ಲೇಖಕರ ಪರಿಚಯ :** ಬೆಂಗಳೂರು ಗುಂಡಪ್ಪ ಲಕ್ಷ್ಮೀನಾರಾಯಣ ಸ್ವಾಮಿ ಎಂಬ ಪೂರ್ಣ ಹೆಸರಿನವರೇ ಬಿ.ಜಿ.ಎಲ್.ಸ್ವಾಮಿ. ಬಿ.ಜಿ.ಎಲ್. ಸ್ವಾಮಿ ಅವರು ೧೯೧೬ರಲ್ಲಿ ಬೆಂಗಳೂರಿನಲ್ಲಿ ಜನಿಸಿದರು. ಅವರ ತಂದೆಯವರು ಕನ್ನಡದ ಪ್ರಖ್ಯಾತ ಲೇಖಕರೂ, ಕವಿಗಳೂ ಆದ ಡಿ.ವಿ.ಗುಂಡಪ್ಪ. ಅವರ ತಾಯಿ ಭಾಗೀರಥಮ್ಮ. ಬಿ.ಜಿ.ಎಲ್.ಸ್ವಾಮಿ ಬಿಎಸ್ಸಿ, ಡಿಎಸ್ಸಿ ಪದವಿಯನ್ನು ಸಸ್ಯಶಾಸ್ತ್ರದಲ್ಲಿ ಪಡೆದು ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಮುಖ್ಯ ಪ್ರಾಧ್ಯಾಪಕರಾಗಿ ಅನಂತರ ಪ್ರಿನ್ಸಿಪಾಲರಾಗಿ ಸೇವೆ ಸಲ್ಲಿಸಿ ೧೯೭೮ರಲ್ಲಿ ನಿವೃತ್ತರಾದರು. ವಿಜ್ಞಾನವನ್ನು ಸಮರ್ಥವಾಗಿ ಸಾಹಿತ್ಯದ ಮೂಲಕ ಪ್ರಚುರ ಪಡಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ..

ಇವರ ಪ್ರಮುಖ ಕೃತಿಗಳು, ದೌರ್ಗಂಧಿಕಾಪಹರಣ, ಶಾಸನಗಳಲ್ಲಿ ಗಿಡಮರಗಳು, ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೆರಿಕ, ಹಸುರು ಹೊನ್ನು, ಪಂಚಕಲಶಗೋಪುರ, ಕಾಲೇಜುರಂಗ, ಕಾಲೇಜು ತರಂಗ ಮತ್ತು ತಮಿಳು ತಲೆಗಳ ನಡುವೆ ಮುಂತಾದವು. ಇವರಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು ದೊರೆತಿವೆ. ಶ್ರೀಯುತರು ದಿನಾಂಕ : ೦೨.೧೧.೧೯೮೦ರಲ್ಲಿ ಇಹಲೋಕವನ್ನು ತ್ಯಜಿಸಿದರು. **ಅರಳಿ ಕಟ್ಟೆ** ಗದ್ಯ ಭಾಗವನ್ನು ಬಿ.ಜಿ.ಎಲ್.ಸ್ವಾಮಿ ಅವರ **ಹಸುರು ಹೊನ್ನು** ಕೃತಿಯಿಂದ ಆರಿಸಲಾಗಿದೆ.

**ಓದಿ ತಿಳಿಯಿರಿ:**

ವೃದ್ಧ – ವಯಸ್ಸಾದ ವ್ಯಕ್ತಿ, ಮುದುಕ, ಕೃಶ – ಬಡಕಲು, ಅಶಕ್ತ, ಉತ್ಕಟ – ಪ್ರಬಲ, ಸಾಷ್ಟಾಂಗ ಬೀಳು – ದೀರ್ಘದಂಡ ನಮಸ್ಕಾರ ಮಾಡು, ಪ್ರತಿಷ್ಠೆ – ಸ್ಥಾಪನೆ, ವಿಘ್ನ – ಅಡಚಣೆ, ಉದ್ಯುಕ್ತ – ಕೆಲಸದಲ್ಲಿ ತೊಡಗಿದ, ಕೃತಕೃತ್ಯ – ಸಾರ್ಥಕ, ಧನ್ಯ, ಇಚ್ಛೆಪೂರ್ತಿಗೊಂಡ, ಕಾಪು – ಕಾಯುವಿಕೆ, ಕಾವಲು, ರಕ್ಷಣೆ.

**ಅನ್ಯದೇಶ್ಯ ಪದಗಳು:**

ರಿಟೈರ್ (ಇಂಗ್ಲಿಷ್) – ನಿವೃತ್ತಿ, ಕಾರ್ಪೋರೇಷನ್ (ಇಂಗ್ಲಿಷ್) – ನಗರ ಪಾಲಿಕೆ, ಸರ್ಕಾರ (ಹಿಂದಿ) – ಆಡಳಿತ ನಡೆಸುವ ವ್ಯವಸ್ಥೆ.

## ಅಭ್ಯಾಸಗಳು

**ಅ. ಒಂದು ವಾಕ್ಯದಲ್ಲಿ ಉತ್ತರಿಸಿರಿ :**

೧. ಲೇಖಕರ ಮನೆಗೆ ಆಗಾಗ ಬರುತ್ತಿದ್ದ ವೃದ್ಧರ ಹೆಸರೇನು?

೨. ಶೇಷಪ್ಪನವರು ಜೀವನೋಪಾಯಕ್ಕೆ ಏನು ಮಾಡುತ್ತಿದ್ದರು?

೩. ಅಶ್ವತ್ಥ ಕಟ್ಟೆಯನ್ನು ಕಟ್ಟಲು ಗುರುತಿಸಿದ ಸ್ಥಳ ಯಾವುದು?

೪. ಈ ಗದ್ಯಭಾಗದ ಲೇಖಕರು ಯಾರು?

೫. ಅರಳಿ ಕಟ್ಟೆ ಗದ್ಯಭಾಗದ ಆಕರ ಗ್ರಂಥ ಯಾವುದು?

೬. ಲೇಖಕರ ಪೂರ್ಣ ಹೆಸರೇನು?

**ಆ. ಎರಡು / ಮೂರು ವಾಕ್ಯಗಳಲ್ಲಿ ಉತ್ತರಿಸಿರಿ:**

೧. ಶೇಷಪ್ಪನವರ ಆಸೆ ಏನು?

೨. ಅಶ್ವತ್ಥಕಟ್ಟೆ ಪ್ರತಿಷ್ಠಾಪನೆ ನಂತರ ಲೇಖಕರ ಮನೆಗೆ ಶೇಷಪ್ಪ ಏನೇನು ತಂದಿದ್ದರು?

೩. ಶೇಷಪ್ಪನವರು ಲೇಖಕರ ಸೋದರತ್ತೆಗೆ ಏನೆಂದು ಹೇಳಿದರು?

೪. ಅಶ್ವತ್ಥಕಟ್ಟೆ ಹೇಗೆ ಜನರಿಗೆ ಉಪಯುಕ್ತವಾಗಿದೆ?

**ಇ ಐದು / ಆರು ವಾಕ್ಯಗಳಲ್ಲಿ ಉತ್ತರಿಸಿರಿ:**

೧. ಶೇಷಪ್ಪನವರ ವ್ಯಕ್ತಿತ್ವವನ್ನು ವಿವರಿಸಿರಿ:

೨. ಶೇಷಪ್ಪನವರಿಗೂ ಲೇಖಕರ ಸೋದರತ್ತೆಗೂ ನಡೆದ ಸಂಭಾಷಣೆಯನ್ನು ವಿವರಿಸಿ.

**ಈ. ಸಂದರ್ಭದೊಡನೆ ಸ್ವಾರಸ್ಯವನ್ನು ವಿವರಿಸಿರಿ.**

೧. "ಇವುಗಳನ್ನು ಯಜಮಾನರಿಗೆ ತಲುಪಿಸಿಬಿಡಿ."

೨. "ಒಂದಿಷ್ಟು ಹಾಲು ಕುಡಿದು ಹೋಗಬೇಕು."

೩. "ಅಕ್ಕಿ ಬೇಳೆ ಸಾಮಗ್ರಿಗಳನ್ನು ನಮ್ಮ ಮನೆಯಿಂದಲೇ ಕೊಡುತ್ತೇನೆ."

೪. "ಅಶ್ವತ್ಥ ಬರಿಯ ಮರವಲ್ಲ."

## ಭಾಷಾಭ್ಯಾಸ

**ಅ) ಈ ಸಂಸ್ಕೃತ ಪದಗಳಿಗೆ ತದ್ಭವ ರೂಪಗಳನ್ನು ಬರೆಯಿರಿ.**

೧. ನಿತ್ಯ ೨. ಕಾರ್ಯ ೩. ಸಂಸ್ಥಾ ೪. ಸ್ಥಾನ ೫. ರಕ್ತ

**ಆ) ಈ ಪದಗಳಿಗೆ ವಿರುದ್ಧಾರ್ಥಕ ರೂಪಗಳನ್ನು ಬರೆಯಿರಿ.**

೧. ಇಳಿ ೨. ಆಸೆ ೩. ಕೃತಜ್ಞತೆ ೪. ಭಾರ ೫. ಭಯ ೬. ನಿಶ್ಚಿಂತೆ

**ಇ) ಕೆಳಗೆ ನೀಡಿರುವ ಪದಗಳನ್ನು ಬಳಸಿ ಮಾದರಿಯಂತೆ ವಿಭಿನ್ನಾರ್ಥಗಳಲ್ಲಿ ವಾಕ್ಯಗಳನ್ನು ರಚಿಸಿರಿ.**

ಮಾದರಿ : ಪ್ರತಿಷ್ಠೆ – * ಈ ಚುನಾವಣೆ ಎರಡೂ ಪಕ್ಷಗಳಿಗೆ ಪ್ರತಿಷ್ಠೆಯ ವಿಷಯವಾಗಿದೆ.

* ನಮ್ಮ ಗ್ರಾಮದಲ್ಲಿ ಶಿವಲಿಂಗ ಪ್ರತಿಷ್ಠೆಯಾಗಿದೆ.

೧. ತೊರೆ ೨. ಮಡಿ ೩. ಕಳೆ ೪. ತಂದೆ ೫. ಮುಗಿ

**ಈ) ಈ ಶಬ್ದಗಳನ್ನು ಬಿಡಿಸಿ ಬರೆಯಿರಿ.**

೧. ಮನೆಗೊಬ್ಬ ೨. ಕಿವಿಯಂತೂ ೩. ಭಿಕ್ಷೆಯಿಂದ ೪. ಮರಕ್ಕೊಂದು ೫.ರಕ್ತಗತವಾಗಿ

**ಚಟುವಟಿಕೆ :**

೧. ನಿಮ್ಮ ಸುತ್ತಮುತ್ತಲಿನಲ್ಲಿ ಇರುವ ಔಷಧೀಯ ಸಸ್ಯಗಳ ಗುಣಗಳನ್ನು ಪಟ್ಟಿ ಮಾಡಿರಿ.

೨. ನಿಮ್ಮ ಸುತ್ತಮುತ್ತಲಿನಲ್ಲಿ ಇರುವ ಸಸ್ಯಗಳ ಎಲೆಗಳನ್ನು ಸಂಗ್ರಹಿಸಿರಿ.

೩. ಔಷಧೀಯ ಸಸ್ಯಗಳನ್ನು ಬೆಳೆಸಿರಿ.

# ಸಂಧಿ

**ಸಂಧಿ :** ಎರಡು ಅಕ್ಷರಗಳು ಕಾಲವಿಳಂಬವಿಲ್ಲದಂತೆ ಕೂಡುವುದಕ್ಕೆ ಸಂಧಿ ಎಂದು ಹೆಸರು.

೧) ಸಂಧಿಯಾಗುವಾಗ ಸ್ವರದ ಮುಂದೆ ಸ್ವರ ಬಂದರೆ ಸ್ವರಸಂಧಿ ಎನ್ನುವರು.

೨) ಸಂಧಿಯಾಗುವಾಗ ಸ್ವರದ ಮುಂದೆ ವ್ಯಂಜನ ಅಥವಾ ವ್ಯಂಜನದ ಮುಂದೆ ವ್ಯಂಜನ ಬಂದರೆ ವ್ಯಂಜನ ಸಂಧಿ ಎನ್ನುವರು.

**ಸಂಧಿಗಳಲ್ಲಿ ಎರಡು ವಿಧ**

**ಕನ್ನಡ ಸಂಧಿಗಳು**

೧. ಲೋಪ ಸಂಧಿ

೨. ಆಗಮ ಸಂಧಿ

೩. ಆದೇಶ ಸಂಧಿ

**ಸಂಸ್ಕೃತ ಸಂಧಿಗಳು**

೧. ಸವರ್ಣದೀರ್ಘ ಸಂಧಿ

೨. ಗುಣ ಸಂಧಿ

೩. ವೃದ್ಧಿ ಸಂಧಿ

೪. ಯಣ್ ಸಂಧಿ

೫. ಶ್ಚುತ್ವ ಸಂಧಿ

೬. ಜಶ್ತ್ವ ಸಂಧಿ

೭. ಅನುನಾಸಿಕ ಸಂಧಿ



**ಸಂಸ್ಕೃತ ಸಂಧಿಗಳು:**

**೧. ಸವರ್ಣಧೀರ್ಘ ಸಂಧಿ:**

ಒಂದೇ ಜಾತಿಯ ವರ್ಣಗಳು ಪರಸ್ಪರ ಪರವಾದಾಗ ಅದೇ ವರ್ಣವು ದೀರ್ಘವಾದರೆ ಅದು **'ಸವರ್ಣದೀರ್ಘ ಸಂಧಿ'** ಎನಿಸುವುದು.

ಉದಾ: ದೇವ + ಆಲಯ = ದೇವಾಲಯ (ಅ + ಆ = ಆ)

ದೇವ + ಅಸುರ = ದೇವಾಸುರ (ಅ + ಆ = ಆ)

ಗುರು + ಉಪದೇಶ = ಗುರೂಪದೇಶ (ಉ + ಉ = ಊ)

ರವಿ + ಇಂದ್ರ = ರವೀಂದ್ರ (ಇ + ಇ = ಈ)

**೨. ಗುಣ ಸಂಧಿ:**

ಅ ಆ ಕಾರಗಳ ಮುಂದೆ ಇ ಈ ಕಾರವು ಬಂದಾಗ 'ಏ' ಕಾರವೂ ಉ, ಊ, ಕಾರವು ಬಂದಾಗ 'ಓ' ಕಾರವೂ 'ಋ'ಕಾರವು ಬಂದಾಗ 'ಅರ್' ಕಾರವು ಆದೇಶವಾಗಿ ಬಂದರೆ ಗುಣಸಂಧಿ ಎನಿಸುವುದು.

ಉದಾ: ದೇವ + ಈಶ = ದೇವೇಶ (ಅ + ಈ = ಏ)

ಸೂರ್ಯ + ಉದಯ = ಸೂರ್ಯೋದಯ (ಅ + ಉ = ಓ)

ಮಹಾ + ಋಷಿ = ಮಹರ್ಷಿ (ಅ + ಋ = ಅರ್)

**೩. ವೃದ್ಧಿ ಸಂಧಿ:**

ಅ ಆ ಕಾರಗಳ ಮುಂದೆ ಏ ಐ ಕಾರವು ಬಂದಾಗ 'ಐ' ಕಾರವೂ ಓ ಔ ಕಾರವು ಬಂದಾಗ 'ಔ' ಕಾರವೂ ಆದೇಶವಾಗಿ ಬಂದರೆ ವೃದ್ಧಿ ಸಂಧಿ ಎನಿಸುವುದು.

ಉದಾ: ಏಕ + ಏಕ = ಏಕೈಕ (ಅ + ಏ = ಐ)

ಶಿವ + ಐಕ್ಯ = ಶಿವೈಕ್ಯ (ಅ + ಐ = ಐ)

ವನ + ಓಷಧ = ವನೌಷಧ (ಅ + ಓ = ಔ)

ಮಹಾ + ಔನ್ನತ್ಯ = ಮಹೌನ್ನತ್ಯ (ಅ + ಔ =ಔ)

## ದೇಶ್ಯ – ಅನ್ಯದೇಶ್ಯ ಪದಗಳು

**೧. ದೇಶ್ಯ ಪದ:**

ಕನ್ನಡ ಭಾಷೆಯ ಮೂಲ ಶಬ್ದಗಳು ಅಥವಾ ಅಚ್ಚಗನ್ನಡ ಶಬ್ದಗಳು ದೇಶ್ಯ ಶಬ್ದಗಳಾಗಿವೆ.

**ಉದಾ:** ಮೂಡಣ, ಪಡುವಣ, ಬಡಗಣ, ತೆಂಕಣ, ಬಾಯಿ, ಕಿವಿ, ಮೂಗು, ಕಾಡು, ನೂರು, ಸಾವಿರ, ಇತ್ಯಾದಿ.

**೨. ಅನ್ಯದೇಶ್ಯ ಪದ:**

ಮರಾಠಿ, ತುಳು, ಅರಬ್ಬಿ, ಫಾರ್ಸಿ, ಪೋರ್ಚುಗೀಸ್, ಇಂಗ್ಲಿಷ್, ಮೊದಲಾದ ಅನ್ಯಭಾಷೆಗಳಿಂದ ಕನ್ನಡಕ್ಕೆ ಬಂದಿರುವ ಶಬ್ದಗಳನ್ನು ಅನ್ಯದೇಶ್ಯ ಶಬ್ದಗಳು ಎಂದು ಕರೆಯುತ್ತಾರೆ.

**ಉದಾ:** ಕಛೇರಿ, ಕಿರಾಣಿ, ಖಾತೆ, ತರಲೆ, ದಿಬ್ಬಣ, ಅಮಲ್ದಾರ್, ಅರ್ಜಿ, ಗುಲಾಮ, ಜನಾಬ, ಆವಾಜು, ಕೊತ್ವಾಲ, ಸುಬೇದಾರ್, ಸಾಬೂನು, ರೋಡು, ರೈಲು, ಹೋಟೆಲ್, ಕಾಲೇಜ್, ಇಗರ್ಜಿ(ಚರ್ಚು).

# ೩. ಅಟ್ಟ ಹತ್ತ ಬೇಡ

– ಎಲ್. ಹನುಮಂತಯ್ಯ

**ಪ್ರವೇಶ ಮತ್ತು ಆಶಯ :**

ಹಲವು ಶತಮಾನಗಳಿಂದ ತುಳಿತಕ್ಕೆ ಒಳಗಾಗಿ, ನೋವು ನುಂಗಿಕೊಂಡಿದ್ದ ಹಲವು ಮನಸುಗಳು ಪ್ರತಿಭಟಿಸುವ ಉದ್ದೇಶದಿಂದ ರೂಪುಗೊಂಡ ಸಾಹಿತ್ಯವೇ ಬಂಡಾಯ ಸಾಹಿತ್ಯ. ಅದು ಸಂಕೋಲೆ ಕಳಚಿ ಒಂದೇ ಸಲಕ್ಕೆ ಚಿಮ್ಮುವ ಚಿಲುಮೆಯಂತೆ ತಮಗಾದ ನೋವು ದುಃಖ ದುಮ್ಮಾನಗಳನ್ನು ಪ್ರಕಟಿಸುವುದರ ಮೂಲಕ ಸಮಾಜದಲ್ಲಿನ ಅಸಮಾನತೆಗಳನ್ನು ಮನಸ್ಸಿಗೆ ಮುಟ್ಟುವಂತೆ ಹೃದಯಕ್ಕೆ ತಟ್ಟುವಂತೆ ರಚನೆಗೊಂಡ ಪ್ರಕಾರ. ತಮ್ಮಲ್ಲಿಯೂ ಶಕ್ತಿ ಇದೆ, ಸಮಾಜದ ಮುಖ್ಯ ವಾಹಿನಿಯಲ್ಲಿ ತಮಗೂ ದಾರಿಬೇಕೆಂದು ಆಗ್ರಹ ಪಡಿಸುವ ಬಂಡಾಯ ಸಾಹಿತ್ಯದ ಕವಿತೆಗಳು ಹಲವಾರು. ಅನುಕಂಪಕ್ಕಿಂತ ಅವಕಾಶ ದೊರೆತರೆ ತಾನು ಸಾಧನೆ ಮಾಡಬಲ್ಲೆ ಎನ್ನುವುದಕ್ಕಿಂತ ಅವಕಾಶವನ್ನು ತಾನೇ ಹುಡುಕುವೆ ಎನ್ನುವ ಸಂಕಲ್ಪ ಕಂಡುಬರುತ್ತದೆ.

ಸಾಮಾಜಿಕ ಕಳಕಳಿ, ಅಸಮಾನತೆ, ಅನ್ಯಾಯದ ವಿರುದ್ಧ ಪ್ರತಿಭಟನೆ, ಇಂತಹ ಹಲವಾರು ಗುಣಗಳು ಬಂಡಾಯ ಸಾಹಿತ್ಯದ ಪ್ರಮುಖ ಲಕ್ಷಣಗಳು.

ಮುಗ್ಧ ಮಗುವಿಗೆ ಬೇಕಾದ ವಸ್ತು ಅಟ್ಟದ ಮೇಲಿದ್ದರೆ ಅದನ್ನು ಪಡೆಯುವ ಆಸೆ ಸಹಜ. ಆದರೆ ಅದನ್ನು ಪಡೆಯಲು ಸುತ್ತಲಿನವರ ವಿರೋಧ. ಕೊನೆಗೆ ತನ್ನ ತಂದೆಯೇ ಅದನ್ನು ಪಡೆಯಲು ಬಿಡುವುದಕ್ಕೆ ತಯಾರಿಲ್ಲ. ಆದರೆ ಬಾಲಕ ಅಟ್ಟದ ಮೇಲಿನ ವಸ್ತುವಿಗಿಂತ ಶ್ರೇಷ್ಠವಾದದ್ದನ್ನು ಪಡೆದೇ ಪಡೆಯುತ್ತೇನೆಂಬ ಹಂಬಲ ತಾಳುತ್ತಾನೆ. ಸೌಮ್ಯ ಪ್ರತಿಭಟನೆಯ ಮೂಲಕ ಸಂಪ್ರದಾಯ ಮುರಿದು ಮೇಲೆ ಬರಲು ಹವಣಿಸುವ ತವಕವನ್ನು ಈ ಕವನದಲ್ಲಿ ಕಾಣಬಹುದು. ನವ ನಿರ್ಮಾಣದ ಕನಸು ಇಲ್ಲಿ ವ್ಯಕ್ತವಾಗಿದೆ.

'ಅಟ್ಟ ಹತ್ತ ಬೇಡ' ಕವನವು ಚಿಕ್ಕ ಕವನವಾಗಿ ಕಂಡರೂ ಸೂಟಿಯಾದ ಚಾಟಿಯಾಗಿದ್ದು, ಸಂಭಾಷಣೆ ರೂಪದಲ್ಲಿರುವುದು ಇನ್ನೂ ಸೊಗಸಾಗಿದೆ. ಶ್ರೇಷ್ಠ ಸಾಧನೆಯ ಸಂಕಲ್ಪ ಎಲ್ಲೆಲ್ಲಿಯೂ ಉಂಟಾದರೆ ಮಾತ್ರ ನವ ಸಮಾಜದ ಹುಟ್ಟಿಗೆ ನಾಂದಿಯಾಗುತ್ತದೆ.





ಅಜ್ಜ:	ಅಟ್ಟ ಹತ್ತಬೇಡ ಮರಿ
ಬೀಳಿಸಲೆಂದೇ ಜಾಳಾಗಿ ಕಟ್ಟಿರುತ್ತಾರೆ

ಮಗ:	ಹಾಗಾದರೆ ಬೆಟ್ಟ ಹತ್ತುತ್ತೇನೆ ಅಜ್ಜ
ಕಲ್ಲು ಮುಳ್ಳುಗಳನ್ನು ಹಾದು
ಮೇಲೆ ಹೋಗುತ್ತೇನೆ.
ದೂರದ ಬೆಟ್ಟ ಎಷ್ಟೊಂದು ನುಣುಪು.

ಅಜ್ಜ:	ಅಟ್ಟ ಹತ್ತದವನು
ಬೆಟ್ಟ ಹತ್ತುತ್ತಾನೆಯೆ ಎಂದು
ನಕ್ಕಾರು ಮಂದಿ ನನಕಂದ

ಮಗ:	ಹೌದಜ್ಜ
ಅಟ್ಟ ಹತ್ತದವನು
ಬೆಟ್ಟ ಹತ್ತುತ್ತಾನೆಂದು ತೋರಿಸಬೇಕಾಗಿದೆ.
ಅಟ್ಟ ಮನುಷ್ಯ ಕಟ್ಟಿರುತ್ತಾನೆ
ಬೆಟ್ಟ ಅವನಿಂದ ನಿರ್ಮಿತವಲ್ಲ
ಅದಕ್ಕೆ ಅಟ್ಟ ನೋಡದೆ ಬೆಟ್ಟ ಹತ್ತುತ್ತೇನೆ
ಮೇಲೇರಿ ನಿಲ್ಲುತ್ತೇನೆ.



**ಕವಿ ಕಾವ್ಯ ಪರಿಚಯ:**



ಡಾ. ಎಲ್. ಹನುಮಂತಯ್ಯನವರು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ರಾಮೇಶ್ವರ ಗ್ರಾಮದಲ್ಲಿ ದಿನಾಂಕ :೧೦.೦೬.೧೯೫೮ ರಂದು ಜನಿಸಿದರು. ಎಂ.ಎ. ಪದವಿ ಪಡೆದ ಇವರು **ಬಂಡಾಯ ಕಥೆಗಳಲ್ಲಿ ದಲಿತ ಪ್ರಜ್ಞೆ** ಎಂಬ ಮಹಾ ಪ್ರಬಂಧಕ್ಕೆ ಪಿಹೆಚ್.ಡಿ. ಪದವಿಯನ್ನು ಪಡೆದಿದ್ದಾರೆ. ಕೃಷಿಕರಾಗಿ, ಅಧ್ಯಾಪಕರಾಗಿ ಮತ್ತು ಕೆಲಕಾಲ ಬ್ಯಾಂಕಿಂಗ್ ವೃತ್ತಿ ಕೈಗೊಂಡ ಇವರ ಪ್ರವೃತ್ತಿ ಸಾಹಿತ್ಯ ರಚನೆ. ಶ್ರೀಯುತರ ಕವನ ಸಂಕಲನಗಳೆಂದರೆ ಕಪ್ಪುಕಣ್ಣಿನ ಹುಡುಗಿ, ಅವ್ವನ ಕವಿತೆ, ಜೀವಗಾನ, ಕರ್ಣರಾಗ, ಅಕ್ಷಾರ ಅಕ್ಷಾರವೇ. ಅಂಬೇಡ್ಕರ್ ಎಂಬ ನಾಟಕ, ದಲಿತ ಲೋಕದ ಒಳಗೆ, ಅಂಬೇಡ್ಕರ್ ಮತ್ತು ಸಮಕಾಲೀನ ಎಂಬ ವೈಚಾರಿಕ ಕೃತಿಗಳನ್ನು ಬರೆದಿದ್ದಾರೆ. ಕರ್ನಾಟಕ ರಾಜ್ಯ ಸರ್ಕಾರದ ಅಂಬೇಡ್ಕರ್ ಪ್ರಶಸ್ತಿ, ಅತ್ತಿಮಬ್ಬೆ ಪ್ರಶಸ್ತಿ ಮತ್ತು ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿವೆ. ೨೦೦೧ ರಿಂದ ೨೦೦೭ ರವರೆಗೆ ವಿಧಾನ ಪರಿಷತ್ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

'ಅಟ್ಟ ಹತ್ತ ಬೇಡ' ಪದ್ಯವನ್ನು 'ಅವ್ವನ ಕವಿತೆ' ಎಂಬ ಕವನ ಸಂಕಲನದಿಂದ ಆರಿಸಿದೆ.

**ಓದಿ ತಿಳಿಯಿರಿ**

ಅಟ್ಟ – ಮನೆಯಲ್ಲಿ ವಸ್ತುಗಳನ್ನು ದಾಸ್ತಾನು ಮಾಡಲು ನಿರ್ಮಿಸಿರುವ ಎತ್ತರದ ಸ್ಥಳ, ಮರಿ – ಮಗು, ಹಾದು – ದಾಟಿ ಅಥವಾ ಮೀರಿ, ಜಾಳು – ಟೊಳ್ಳು, ಗಟ್ಟಿಯಾಗಿಲ್ಲದ್ದು, ಮಂದಿ – ಜನ.

**ವಿಶೇಷಾರ್ಥ ಪದಗಳು:**

ಅಟ್ಟ ಹತ್ತಿಸು – ಅತಿಯಾಗಿ ಹೊಗಳು

ದೂರದ ಬೆಟ್ಟ – ಕೈಗೆಸಿಗದ

ಬೀಳಿಸು – ಸೋಲಿಸು

ಮೇಲೇರಿ ನಿಲ್ಲು – ಬಲಿಷ್ಠನಾಗು

**ಅಭ್ಯಾಸಗಳು**

**ಅ. ಒಂದು ವಾಕ್ಯದಲ್ಲಿ ಉತ್ತರಿಸಿರಿ:**

೧. ಅಜ್ಜನ ಉಪದೇಶವೇನು?

೨. ಅಟ್ಟವನ್ನು ಹೇಗೆ ಕಟ್ಟಿರುತ್ತಾರೆ?

೩. ಮಗನ ಸವಾಲು ಏನು?

೪. ದೂರದ ಬೆಟ್ಟ ಹೇಗೆ ಕಾಣುತ್ತದೆ?

೫. ಬೆಟ್ಟ ಯಾರಿಂದ ನಿರ್ಮಿತವಲ್ಲ?

**ಆ. ಎರಡು ಅಥವಾ ಮೂರು ವಾಕ್ಯದಲಿ ಬರೆಯಿರಿ:**

೧. ಬೆಟ್ಟ ಹತ್ತುವ ಹಾದಿ ಹೇಗಿರುತ್ತದೆ?

೨. ಮಂದಿ ಏಕೆ ನಗುತ್ತಾರೆ?

೩. ಹುಡುಗನ ಸಂಕಲ್ಪ ಏನು?

**ಇ. ಐದು /ಆರು ವಾಕ್ಯಗಳಲ್ಲಿ ಉತ್ತರಿಸಿರಿ:**

೧. ಹುಡುಗನ ಮತ್ತು ಅಜ್ಜನ ಸಂಭಾಷಣೆಯನ್ನು ನಿಮ್ಮ ಮಾತುಗಳಲ್ಲಿ ವಿವರಿಸಿ.

**ಭಾಷಾಭ್ಯಾಸ**

ಕಲ್ಲು – ಮುಳ್ಳು ಇಂತಹ ಐದು ಜೋಡಿ ಪದಗಳನ್ನು ಬರೆಯಿರಿ.

# ೪. ಅವರೇ ರಾಜರತ್ನಂ !

– ಕೆ.ಪಿ.ಪೂರ್ಣಚಂದ್ರ ತೇಜಸ್ವಿ

**ಪ್ರವೇಶ ಮತ್ತು ಆಶಯ**

ಕೆಲವರು ಒಂದಿಲ್ಲೊಂದು ಸಂದರ್ಭದಲ್ಲಿ ಆತ್ಮೀಯರನ್ನೋ ಗೆಳೆಯರನ್ನೋ, ಸಂಬಂಧಿಕರನ್ನೋ ಭೇಟಿಯಾದಾಗ ಅವರನ್ನು ಗುರುತಿಸದೇ ಅಪರಿಚಿತರೆಂದೇ ಪರಿಗಣಿಸಿ ಅವರನ್ನು ಅತ್ಮೀಯತೆಯಿಂದ ಮಾತನಾಡಿಸುವುದಿಲ್ಲ. ಇದೇ ರೀತಿ ಮನೆಗೆ ಬರುವ ಅತಿಥಿಗಳನ್ನೂ ಕೂಡ ಕೆಲವು ಸಂದರ್ಭದಲ್ಲಿ ಗುರುತಿಸದೇ ಅಪರಿಚಿತರೆಂದು ಪರಿಗಣಿಸಿ ಅವರನ್ನು ಮನೆಯ ಒಳಗೂ ಕರೆಯುವುದಿಲ್ಲ. ಅವರು ನಮಗೆ ಬಹಳ ಆತ್ಮೀಯರೆಂಬ ನೈಜಸ್ಥಿತಿ ಕೊನೆಗೆ ತಿಳಿದಾಗ ಇವರನ್ನು ಹೊರಗೇ ನಿಲ್ಲಿಸಿಯೇ ಮಾತನಾಡಿಸಿದೆನಲ್ಲ, ಅವರನ್ನು ಅಪರಿಚಿತರೆಂದೇ ತಿಳಿದಿದ್ದೆನಲ್ಲಾ ಎಂದು ಮುಂತಾಗಿ ಮನಸ್ಸಿನಲ್ಲಿ ಬೇಸರ ಪಡುತ್ತೇವೆ. ಇದೇ ರೀತಿ ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರು ತಮ್ಮ ಮನೆಗೆ ಬಂದ ಜಿ.ಪಿ.ರಾಜರತ್ನಂ ಅವರನ್ನು ಗುರುತಿಸದೇ ಅಪರಿಚಿತರೆಂದು ತಪ್ಪಾಗಿ ತಿಳಿದು 'ಮುಂದೆ ಹೋಗಪ್ಪಾ' ಎಂದು ಹೇಳುತ್ತಾರೆ. ಅಂತಿಮವಾಗಿ ಇವರೇ ರಾಜರತ್ನಂ ಎಂದು ತಂದೆ ಕುವೆಂಪುರವರಿಂದ ತಿಳಿದು ತಬ್ಬಿಬ್ಬಾದ ಪ್ರಸಂಗವನ್ನು ಈ ಭಾಗ ತಿಳಿಸುತ್ತದೆ.



ಮೊದಲೆಲ್ಲಾ ಯಾವತ್ತೂ ಅಣ್ಣನನ್ನು ನೋಡಬರುವವರಿಂದ ನಮಗೆ ತೊಂದರೆಯೇ ಆಗಿರಲಿಲ್ಲ. ಹೆಚ್ಚೆಂದರೆ ಭಿಕ್ಷುಕರ ಕಾಟವಷ್ಟೇ ನಮಗೆ ಗೊತ್ತಿದ್ದಿದ್ದು. ಭಿಕ್ಷುಕರಿಗೆ ಭಿಕ್ಷೆ ಹಾಕುವುದು ಅವರನ್ನು ಪ್ರೋತ್ಸಾಹಿಸಿದ ಹಾಗೆ ಎಂದು ಒಂದು ದಿನ ಅಣ್ಣ ನಮಗೆ ಜೋರು ಮಾಡಿದರು. ಅವರು ಆಶ್ರಮದಲ್ಲಿದ್ದಾಗ ಒಬ್ಬ ಹೆಳವನಿಗೆ ಮೂರುಕಾಸು, ಆರುಕಾಸು ಭಿಕ್ಷೆ ಹಾಕುತ್ತಿದ್ದರಂತೆ. ಆಗಲೂ ಆಶ್ರಮದ ಸ್ವಾಮಿಗಳಾದ ಸಿದ್ಧೇಶ್ವರಾನಂದರು ಭಿಕ್ಷಾವೃತ್ತಿಗೆ ಉತ್ತೇಜನ ನೀಡುವುದಕ್ಕೆ ಬದ್ಧ ವಿರೋಧಿಗಳಾಗಿದ್ದರು. ಒಮ್ಮೆ ಅಣ್ಣ ಆ ಹೆಳವನಿಗೆ ಭಿಕ್ಷೆ ನೀಡುತ್ತಿದ್ದಾಗ ಆಕಸ್ಮಿಕವಾಗಿ ಸಿದ್ಧೇಶ್ವರಾನಂದರು ಅಲ್ಲಿಗೆ ಬಂದರು. ಕೈಕಾಲೆಲ್ಲಾ ಸೊಟ್ಟ ಮಾಡಿಕೊಂಡು ಸ್ವಾಮೀ ಎಂದು ಕರುಣಾಜನಕವಾಗಿ ಅಂಗಲಾಚುತ್ತಿದ್ದ ಆ ಹೆಳವ, ಸಿದ್ಧೇಶ್ವರಾನಂದರನ್ನು ನೋಡಿದ ಕೂಡಲೇ ಸಟ್ಟನೆ ಕೈಕಾಲುಗಳನ್ನು ನೆಟ್ಟಗೆ ಮಾಡಿಕೊಂಡು ವೇಗವಾಗಿ ಆಶ್ರಮದ ಆವರಣದಿಂದ ಆಚೆಗೆ ಓಡಿಹೋದನಂತೆ. ಸಿದ್ಧೇಶ್ವರಾನಂದರು ಅಣ್ಣನ ಮೂರ್ಖತನಕ್ಕೆ ಸರಿಯಾಗಿ ಛೀಮಾರಿ ಮಾಡಿದರು. ಅಣ್ಣನಿಗೆ ದುಡ್ಡು ಕಳಕೊಂಡಿದ್ದಕ್ಕಿಂತ ಹೆಚ್ಚಾಗಿ ಇಷ್ಟು ದಿನ ಮೋಸಹೋದೆನಲ್ಲಾ ಎಂಬುದು ಹೆಚ್ಚು ಬೇಸರದ ಸಂಗತಿಯಾಗಿತ್ತು.

ಅಣ್ಣ ಆಗಾಗ್ಗೆ ನಮಗೆ ಈ ಕಥೆ ಹೇಳಿ ಭಿಕ್ಷಕ್ಕೆ ಬರುವವರೆಲ್ಲ ಸಾಧಾರಣವಾಗಿ ಮೋಸಗಾರರು, ಅಥವಾ ಕದಿಯಲು ಏನಾದರೂ ಇದೆಯೆ ಎಂದು ನೋಡಿಕೊಂಡು ಹೋಗಲು ಬರುವ ಕಳ್ಳರು, ಇಲ್ಲವೇ ದುಡಿದು ತಿನ್ನಲು ಇಷ್ಟವಿಲ್ಲದ ಸೋಮಾರಿಗಳು. ಆದ್ದರಿಂದ ಅವರಿಗೆ ಭಿಕ್ಷೆ ಹಾಕಿ ಪ್ರೋತ್ಸಾಹಿಸಬೇಡಿ ಎಂದು ಹೇಳುತ್ತಿದ್ದರು. ಆದರೂ ಅಮ್ಮ ಮಾತ್ರ ನಮ್ಮ ಮನೆ ಹತ್ತಿರ ಬರುತ್ತಿದ್ದ ಎರಡು ಮೂರು ಜನ ಕುಷ್ಟ ರೋಗಿಗಳಿಗೆ ಕನಿಕರದಿಂದ ಭಿಕ್ಷೆ ಹಾಕೇ ಹಾಕುತ್ತಿದ್ದರು. ನಾವು ಮಾತ್ರ ಅಣ್ಣನ ಬೋಧನೆಯನ್ನು ಶಿರಸಾವಹಿಸಿ ಯಾರು ಮನೆಗೆ ಬಂದರೂ "ಮುಂದೆ ಹೋಗಪ್ಪಾ" ಎಂದು ಕೂಗುತ್ತಿದ್ದೆವು.

ಒಂದು ಸಾರಿ ಬಿಳಿಯ ಅಡ್ಡ ಪಂಚೆ ಹಾಗೂ ಬಿಳಿಯ ಅಂಗಿ, ಮೈಮೇಲೆ ನಸು ಕಂದು ಧೋತ್ರ ಹೊದ್ದವರೊಬ್ಬರು ನಮ್ಮ ಮನೆ ಬಾಗಿಲು ತೆರೆಯಲು ಸಾಹಸ ಪಡುತ್ತಿದ್ದುದನ್ನು ನೋಡಿದೆವು. ಅವರ ಬಗಲಲ್ಲೊಂದು ದೊಡ್ಡ ಜೋಳಿಗೆಯಂಥ ಚೀಲ ಇತ್ತು. ಮನೆಯ ಚಿಕ್ಕ ಗೇಟನ್ನು ಕೊಂಚ ಎತ್ತಿ ಅಗುಳಿ ತೆರೆಯಬೇಕಾಗಿದ್ದರಿಂದ ಹೊರಗಿನಿಂದ ತೆಗೆಯುವುದು ಕಷ್ಟ ಇತ್ತು. ಅವರನ್ನು ನೋಡಿದ ಚೈತ್ರ "ಮುಂದೆ ಹೋಗಪ್ಪಾ" ಎಂದು ಕೂಗಿದ. ಆದರೂ ಆ ವ್ಯಕ್ತಿ ತಮ್ಮ ಗೇಟು ತೆಗೆಯುವ ಪ್ರಯತ್ನ ಮುಂದುವರೆಸಿದ್ದನ್ನು ನೋಡಿ ನಾವೆಲ್ಲರೂ ಸಾಮೂಹಿಕವಾಗಿ ಮುಂದೆ ಹೋಗಪ್ಪಾ, ಎಂದು ಕಿರುಚಿದೆವು. ಆಮೇಲೂ ಅವರು ನಿಂತೆ ಇದ್ದುದನ್ನು ನೋಡಿ ನಾವು ಅಣ್ಣನಿಗೆ ಚಾಡಿ ಹೇಳಲು ಒಳಗೆ ಓಡಿದೆವು. ಬಂದ ವ್ಯಕ್ತಿಯೇನೂ ಭಿಕ್ಷುಕರ ರೀತಿ ಕೊಳಕು ಬಟ್ಟೆಯಲ್ಲಿ ಭಿಕ್ಷಾಪಾತ್ರೆ ಹಿಡಿದವರಲ್ಲ. ಆದರೆ ಅನೇಕ ದಾಸಯ್ಯಗಳೂ, ಮಾರಿ ಭಕ್ತರೂ, ಎಂತೆಂಥವಕ್ಕೋ ಚಂದಾ ವಸೂಲಿ ಮಾಡಲು ಬರುವವರು ಟ್ರಿಮ್ಮಾಗಿಯೇ ಬಟ್ಟೆ ಹಾಕಿಕೊಂಡು ಭಿಕ್ಷಾಟನೆಗೆ ಬರುತ್ತಿದ್ದುದರಿಂದ ನಾವು ನಮಗೆ ಗುರುತು ಪರಿಚಯ ಇಲ್ಲದೆ ಮನೆಯೊಳಗೆ ಬರುವವರನ್ನೆಲ್ಲಾ ಮುಂದೆ ಕಳಿಸಬೇಕಾದ ಭಿಕ್ಷದವರೆಂದೇ ತೀರ್ಮಾನಿಸಿ ಕೂಗುತ್ತಿದ್ದೆವು. ಅಣ್ಣನ ಬಳಿ ಹೋಗಿ "ಯಾವನೊ ಒಬ್ಬ ಮುಂದೆ ಹೋಗು ಅಂದರೂ ಹೋಗದೆ ನಿಂತೇ ಇದ್ದಾನೆ" ಎಂದು ಚಾಡಿ ಹೇಳಿದೆವು. ಅಣ್ಣ ಹೊರಬಂದು ನೋಡಿದವರೇ ಅವರ ಗುರುತು ಹಿಡಿದು "ಓಹ್ಹೊ ಬನ್ನಿ ಬನ್ನಿ" ಎಂದೆನ್ನುತ್ತಾ ಅವರೇ ಸರಸರ ಮುಂದುವರೆದು ಗೇಟು ತೆಗೆದು ದಟ್ಟಿ ಪಂಚೆಯ ಮನುಷ್ಯನನ್ನು ಕರೆದುಕೊಂಡು ಬಂದರು. ಮುಂದೆ ಹೋಗು ಎಂದು ಹೇಳಿದ ಮನುಷ್ಯನಿಗೆ ಸಿಕ್ಕ ಮರ್ಯಾದೆಯನ್ನು ನೋಡಿ ನಾವು ಅಪ್ರತಿಭರಾಗಿ ನಿಂತಿದ್ದೆವು. ಬಂದಾತ "ಏನು ಪುಟ್ಟಪ್ಪಾ! ಮನೆಗೆ ಬಂದವರನ್ನೆಲ್ಲ ಮುಂದೆ ಕಳಿಸಿಬಿಡಿ ಎಂದು ಹೇಳಿದ್ದೀರಾ?" ಎಂದು ತಮಾಷೆಯಾಗಿ ಕೇಳಿದರು. ಅದಕ್ಕೆ ಅಣ್ಣ ನಮ್ಮ ಕಡೆ ತಿರುಗಿ "ಇವರು ಯಾರು ಗೊತ್ತಾ?" ಎಂದು ಕೇಳಿದರು. ನಮಗೇನು ಗೊತ್ತು. ನಮಗೆ ಗೊತ್ತಿದ್ದರೆ ನಾವ್ಯಾಕೆ ಮುಂದೆ ಹೋಗು ಎಂದು ಹೇಳುತ್ತಿದ್ದೆವು. ನಮ್ಮ ಪಿಳಿಪಿಳಿ ಕಣ್ಣುಗಳನ್ನು ನೋಡಿ "ನಿಮ್ಮ ಪುಸ್ತಕದಲ್ಲಿ ಬಣ್ಣದ ತಗಡಿನ ತುತ್ತೂರಿ, ಕಾಸಿಗೆ ಕೊಂಡನು ಕಸ್ತೂರಿ ಓದಿದ್ದೀರಲ್ಲಾ. ಇವರೇ ಅದನ್ನು ಬರೆದವರು." ಎಂದರು.

ಅವರೇ ರಾಜರತ್ನಂ! ನಾವು ಆವರೆಗೂ ಕವಿತೆಗಳು ಸಹ ಹುಡುಗರು ಮಕ್ಕಳು ಮರ ಗಿಡ ಇರುವಂತೆ ಪ್ರಪಂಚದಲ್ಲಿರುವ ವಸ್ತುಗಳು ಎಂದು ತಿಳಿದಿದ್ದವರು. ಕವಿತೆಗಳನ್ನು ಕವಿಗಳು ಬರೆಯುತ್ತಾರೆ. ಎಂದು ತಿಳಿದಿದ್ದೇ ಅವತ್ತು. ಆಮೇಲಿಂದ ನಾವು ಕವಿತೆ ಓದುವಾಗಲೆಲ್ಲಾ ಅದು ಮುಗಿದ ಮೇಲೆ ಕೆಳಗೆ ಕೊಟ್ಟಿರುವ ಕವಿಯ ಹೆಸರನ್ನೂ ಬಾಯಿಪಾಠ ಮಾಡಿಕೊಂಡು ಕಿರುಚುತ್ತಿದ್ದೆವು. ರಾಜರತ್ನಂ ಆಮೇಲೆ ಯಾವಾಗಲಾದರೂ ಮನೆಗೆ ಬಂದಾಗ ನಮ್ಮನ್ನು ಕಂಡರೆ "ಏನ್ರಪ್ಪಾ ಒಳಗೆ ಬರಬಹುದೋ, ಮುಂದೆ ಹೋಗಬೇಕೋ?" ಎಂದು ತಮಾಷೆ ಮಾಡುತ್ತಿದ್ದರು.

## ಲೇಖಕರ ಪರಿಚಯ :



ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರು ೦೮.೦೯.೧೯೩೮ ರಂದು ಜನಿಸಿದರು. ಇವರು ಶಿವಮೊಗ್ಗ ಮತ್ತು ಮೈಸೂರಿನಲ್ಲಿ ಶಿಕ್ಷಣ ಪಡೆದಿದ್ದರು. ಕನ್ನಡದ ಶ್ರೇಷ್ಠ ಬರಹಗಾರರಲ್ಲೊಬ್ಬರಾದ ಇವರು ಹಲವಾರು ಪ್ರಕೃತಿ ಹಾಗೂ ಪರಿಸರಕ್ಕೆ ಸಂಬಂಧಿಸಿದ ಕೃತಿಗಳನ್ನು ಬರೆದಿದ್ದಾರೆ. ಹುಲಿಯೂರಿನ ಸರಹದ್ದು, ನಿಗೂಢ ಮನುಷ್ಯರು ಎಂಬ ಕಿರು ಕಾದಂಬರಿಗಳನ್ನೂ ಜುಗಾರಿ ಕ್ರಾಸ್, ಚಿದಂಬರ ರಹಸ್ಯ ಎಂಬ ಕಾದಂಬರಿಗಳನ್ನೂ ಅಲೆಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್ ಎಂಬ ಪ್ರವಾಸ ಕಥನವನ್ನೂ ಅವರು ಬರೆದಿದ್ದಾರೆ. ಅಬಚೂರಿನ ಪೋಸ್ಟಾಫೀಸು ಮತ್ತು ತಬರನಕಥೆ ಚಲನಚಿತ್ರಗಳಾಗಿವೆ. ಇವರ ಕರ್ವಾಲೋ ಕಾದಂಬರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಚಿದಂಬರ ರಹಸ್ಯ ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ. ಇವರ ಸಾಹಿತ್ಯ ಸೇವೆ ಗುರುತಿಸಿದ ಕರ್ನಾಟಕ ಸರ್ಕಾರ ಪಂಪ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

"ಅವರೇ ರಾಜರತ್ನಂ!" ಎಂಬ ಭಾಗವನ್ನು ತೇಜಸ್ವಿ ಅವರ "ಅಣ್ಣನ ನೆನಪು" ಕೃತಿಯಿಂದ ಆರಿಸಲಾಗಿದೆ.

## ಓದಿ ತಿಳಿಯಿರಿ

ಜೋರು ಮಾಡು – ದಬಾಯಿಸು, ಹೆಳವ – ಕುಂಟ, ಅಂಗಲಾಚು – ಬೇಡು, ಮೂರ್ಖತನ – ದಡ್ಡನತ, ಛೀಮಾರಿ ಹಾಕು – ಮಾಡಿದ ತಪ್ಪನ್ನು ತಿಳಿಸಿ ಬುದ್ಧಿವಾದ ಹೇಳು, ಸೋಮಾರಿ – ಕೆಲಸ ಮಾಡದೇ ಇರುವವನು, ಶಿರಸಾವಹಿಸು – ಮರುಮಾತನಾಡದೇ ಒಪ್ಪಿಕೊಳ್ಳು, ಧೋತ್ರ – ಪಂಚೆ, ಬಗಲು – ಪಕ್ಕೆ, ಸಾಮೂಹಿಕ – ಒಟ್ಟು, ಚಾಡಿ –ಇಲ್ಲದ್ದನ್ನು ಹೇಳು, ಅಪ್ರತಿಭ – ದಿಗ್ಭ್ರಮೆ, ಕಿರುಚು – ಜೋರಾಗಿ ಕೂಗು.



## ಅಭ್ಯಾಸ

### ಅ. ಒಂದು ವಾಕ್ಯದಲ್ಲಿ ಉತ್ತರಿಸಿ:

೧. ಕುವೆಂಪುರವರ ಮನೆಯವರಿಗೆ ಯಾರಿಂದ ಹೆಚ್ಚು ಕಾಟವಿತ್ತು?

೨. ಕುವೆಂಪುರವರು ಮಕ್ಕಳಿಗೆ ಒಂದು ದಿನ ಏನೆಂದು ಜೋರು ಮಾಡಿದರು?

೩. ಆಶ್ರಮದಲ್ಲಿದ್ದಾಗ ಕುವೆಂಪು ಅವರು ಯಾರಿಗೆ ಭಿಕ್ಷೆ ಹಾಕುತ್ತಿದ್ದರು?

೪. ಸ್ವಾಮಿ ಸಿದ್ಧೇಶ್ವರಾನಂದರನ್ನು ನೋಡಿದ ಕೂಡಲೆ ಹೆಳವ ಏನು ಮಾಡಿದನು?

೫. ಕುವೆಂಪು ತಮ್ಮ ಮಕ್ಕಳಿಗೆ ಏನೆಂದು ಹೇಳುತ್ತಿದ್ದರು?

೬. ಕುವೆಂಪುರವರ ಪತ್ನಿ ಯಾರಿಗೆ ಭಿಕ್ಷೆ ಹಾಕುತ್ತಿದ್ದರು?

೭. ಬಟ್ಟೆಗಳನ್ನು ಟ್ರಿಮ್ಮಾಗಿಯೇ ಹಾಕಿಕೊಂಡು ಭಿಕ್ಷಾಟನೆಗೆ ಬರುತ್ತಿದ್ದವರು ಯಾರು?

೮. ಕುವೆಂಪುರವರ ಬಳಿ ಮಕ್ಕಳು ಹೋಗಿ ಏನೆಂದು ಚಾಡಿ ಹೇಳಿದರು?

೯. ಕುವೆಂಪುರವರು ಮನೆ ಮುಂದೆ ನಿಂತವರನ್ನು ಗುರುತು ಹಿಡಿದು ಏನು ಮಾಡಿದರು?

೧೦. ರಾಜರತ್ನಂರವರು ಏನೆಂದು ತಮಾಷೆ ಮಾಡುತ್ತಿದ್ದರು?

**ಆ. ಎರಡು / ಮೂರು ವಾಕ್ಯಗಳಲ್ಲಿ ಉತ್ತರಿಸಿರಿ:**

೧. ಕುವೆಂಪುರವರಿಗೆ ಯಾವುದು ಬೇಸರದ ಸಂಗತಿಯಾಗಿತ್ತು? ಏಕೆ?

೨. ತಮ್ಮ ಮಕ್ಕಳಿಗೆ ಕುವೆಂಪುರವರು ಭಿಕ್ಷುಕರನ್ನು ಕುರಿತು ಏನನ್ನು ಹೇಳುತ್ತಿದ್ದರು?

೩. ರಾಜರತ್ನಂರವರ ಉಡುಪು ಹೇಗಿತ್ತು? ಇವರನ್ನು ಕಂಡ ಚೈತ್ರ ಏನೆಂದು ಕೂಗಿದ?

೪. ರಾಜರತ್ನಂರವರನ್ನು ತಿಳಿಯದೆ ಕುವೆಂಪುರವರಲ್ಲಿ ಮಕ್ಕಳು ಏನೆಂದು ಚಾಡಿ ಹೇಳಿದರು?

೫. ರಾಜರತ್ನಂರವರು ಪುಟ್ಟಪ್ಪನವರನ್ನು ಏನೆಂದು ತಮಾಷೆ ಮಾಡುತ್ತಿದ್ದರು? ಏಕೆ?

೬. ಕವಿತೆಗಳ ಬಗ್ಗೆ ಚಿಕ್ಕವರಾಗಿದ್ದಾಗ ತೇಜಸ್ವಿಯವರು ಏನೆಂದು ತಿಳಿದಿದ್ದರು?

**ಇ. ಐದಾರು ವಾಕ್ಯಗಳಲ್ಲಿ ಉತ್ತರಿಸಿರಿ:**

೧. ಭಿಕ್ಷುಕರ ಬಗ್ಗೆ ಕುವೆಂಪುರವರ ಆರಂಭಿಕ ಮತ್ತು ಅನಂತರದ ನಿಲುವುಗಳೇನು?

೨. ರಾಜರತ್ನಂ ಕುವೆಂಪುರವರ ಮನೆಗೆ ಬಂದಾಗ ಮಕ್ಕಳು ಏನೆಂದು ಹೇಳಿದರು? ಏಕೆ?

**ಈ. ಸಂದರ್ಭದೊಡನೆ ವಿವರಿಸಿರಿ:**

೧. ಆರುಕಾಸು ಭಿಕ್ಷೆ ಹಾಕುತ್ತಿದ್ದರಂತೆ.

೨. ಸ್ವಾಮಿ ಎಂದು ಕರುಣಾಜನಕವಾಗಿ ಅಂಗಲಾಚುತ್ತಿದ್ದ.

೩. ಮುಂದೆ ಹೋಗಪ್ಪಾ ಎಂದು ಕಿರುಚಿದೆವು.

೪. ಇವರೇ ಅದನ್ನು ಬರೆದವರು.

೫. ಅವರೇ ರಾಜರತ್ನಂ!

೬. ಕವಿತೆಗಳನ್ನು ಕವಿಗಳು ಬರೆಯುತ್ತಾರೆ ಎಂದು ತಿಳಿದಿದ್ದೇ ಆವತ್ತು.

೭. "ಏನ್ರಪ್ಪಾ ಒಳಗೆ ಬರಬಹುದೋ, ಮುಂದೆ ಹೋಗಬೇಕೋ?"

೮. ಕವಿಯ ಹೆಸರನ್ನೂ ಬಾಯಿಪಾಠ ಮಾಡಿಕೊಂಡು ಕಿರುಚುತ್ತಿದ್ದೆವು.

## ಭಾಷಾಭ್ಯಾಸ

**ಅ. ಬಿಟ್ಟ ಸ್ಥಳವನ್ನು ಸೂಕ್ತ ಪದಗಳಿಂದ ತುಂಬಿರಿ:**

೧. ಭಿಕ್ಷುಕರಿಗೆ ಭಿಕ್ಷೆ ಹಾಕುವುದು ಅವರನ್ನು ________

೨. ಸ್ವಾಮಿ ಸಿದ್ಧೇಶ್ವರಾನಂದರು ಭಿಕ್ಷಾವೃತ್ತಿಗೆ ಉತ್ತೇಜನ ನೀಡುವುದಕ್ಕೆ ________

೩. ಅಣ್ಣನ ಬೋಧನೆಯನ್ನು ಶಿರಸಾವಹಿಸಿ ಯಾರೇ ಬಂದರೂ ______ ಎಂದು ಕೂಗಿಕೊಳ್ಳುತ್ತಿದ್ದೆವು.

೪. ಅವರು ನಿಂತೆ ಇದ್ದುದನ್ನು ನೋಡಿದ ನಾವು ಅಣ್ಣನಿಗೆ ______ ಹೇಳಲು ಒಳಗೆ ಓಡಿದೆವು.

೫. ಬಣ್ಣದ ತಗಡಿನ ತುತ್ತೂರಿ ಕಾಸಿಗೆ ಕೊಂಡನು ಕಸ್ತೂರಿ ಎಂಬ ಕವಿತೆ ಬರೆದವರು ______

**ಆ. ಗುಂಪಿಗೆ ಸೇರದ ಪದ ಆರಿಸಿ ಬರೆಯಿರಿ**

೧. ತಂದೆ, ಅಣ್ಣ, ತಮ್ಮ, ಸ್ನೇಹಿತ.

೨. ಮನೆಯನ್ನು, ಕರುವನ್ನು, ಏನನ್ನು, ಶಾಲೆಯನ್ನು

೩. ಬಾಗಿಲು, ಕಿಟಕಿ, ಜೋಳಿಗೆ, ಅಟ್ಟ.

೪. ಸರಸರ, ಬನ್ನಿ ಬನ್ನಿ, ನಿಲ್ಲು ನಿಲ್ಲು, ಬೇಗ ಬೇಗ.

೫. ಕಣ್ಣು, ದೇಹ, ಕಿವಿ, ಮೂಗು.

**ಇ. ಕೆಳಗಿನ ಪದಗಳನ್ನು ಸ್ವಂತ ವಾಕ್ಯದಲ್ಲಿ ಬಳಸಿ ಬರೆಯಿರಿ:**

ತೊಂದರೆ, ಆಕಸ್ಮಿಕ, ಛೀಮಾರಿ, ಪ್ರೋತ್ಸಾಹ, ಕನಿಕರ

**ಈ. ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ:**

ಹೆಚ್ಚು x ಸಾಧಾರಣ x ಕಷ್ಟ x ಮುಂದೆ x

**ಉ. ಕೆಳಗಿನ ಪದಗಳಿಗೆ ಬಹುವಚನ ರೂಪಗಳನ್ನು ಬರೆಯಿರಿ:**

ಭಿಕ್ಷುಕ, ಚೀಲ, ಸೋಮಾರಿ, ಬಾಗಿಲು, ಮಗು, ಕವಿತೆ.

**ಊ. ಕೆಳಗಿನ ಪದಗಳ ವಿಭಕ್ತಿ ಪ್ರತ್ಯಯಗಳನ್ನು ಗುರುತಿಸಿ ಬರೆಯರಿ:**

ಮನೆಯಿಂದ, ಕಾಲೇಜಿಗೆ, ಊಟವನ್ನು, ಪುಸ್ತಕದ, ದಾರಿಯಲ್ಲಿ



## ಚಟುವಟಿಕೆ

೧. ತೇಜಸ್ವಿಯವರ 'ಅಣ್ಣನ ನೆನಪು' ಎಂಬ ಕೃತಿಯನ್ನು ಓದಿರಿ.

೨. ರಾಜರತ್ನಂರವರು ಬರೆದಿರುವ ಹತ್ತು ಕೃತಿಗಳನ್ನು ಪಟ್ಟಿ ಮಾಡಿರಿ.

# ವಾಚಕಗಳು

**ನಾಮಪದ :** ಹೆಸರನ್ನು ಸೂಚಿಸುವ ಪದಗಳಿಗೆ ನಾಮಪದಗಳು ಎಂದು ಸ್ಥೂಲವಾಗಿ ಹೇಳಬಹುದು. ನಾಮಪದವು ನಾಮಪ್ರಕೃತಿ ಮತ್ತು ವಿವಿಧ ಪ್ರತ್ಯಯಗಳು ಸೇರುವುದರಿಂದ ಏರ್ಪಡುತ್ತದೆ. ನಾಮಪ್ರಕೃತಿ ಎಂದರೆ ನಾಮ ಪದದ ಮೂಲ ರೂಪ. ಉದಾಹರಣೆಗಾಗಿ ಈ ಪದಗಳನ್ನು ಗಮನಿಸಿ.

ನಾಮ ಪ್ರಕೃತಿ + ಪ್ರತ್ಯಯ = ನಾಮಪದ

ಮನೆ + ಅನ್ನು = ಮನೆಯನ್ನು

ರಾಮ + ಅನ್ನು = ರಾಮನನ್ನು

ಕೆಲವೊಮ್ಮೆ ಒಂದಕ್ಕಿಂತ ಹೆಚ್ಚು ನಾಮಪ್ರಕೃತಿಗಳು ಕೂಡಿ ನಾಮಪದಗಳಾಗುವುದು.

**ನಾಮ ಪ್ರಕೃತಿ + ನಾಮ ಪ್ರಕೃತಿ = ನಾಮಪದ**

ತಿಪ್ಪ + ಅಣ್ಣ = ತಿಪ್ಪಣ್ಣ

ತಿಮ್ಮ + ಅಯ್ಯ = ತಿಮ್ಮಯ್ಯ

ತಿಮ್ಮ + ಅಕ್ಕ = ತಿಮ್ಮಕ್ಕ

ರಾಜ + ಅಣ್ಣ = ರಾಜಣ್ಣ

ರಾಜ + ಕುಮಾರ = ರಾಜಕುಮಾರ

**ನಾಮಪ್ರಕೃತಿ + ನಾಮಪ್ರಕೃತಿ + ನಾಮಪ್ರಕೃತಿ = ನಾಮಪದ**

ತಿಮ್ಮ + ರಾಜ + ಗೌಡ =ತಿಮ್ಮರಾಜಗೌಡ

ಪೂರ್ಣ + ಚಂದ್ರ + ತೇಜಸ್ವಿ = ಪೂರ್ಣಚಂದ್ರತೇಜಸ್ವಿ



ಒಂದು ವಸ್ತು, ಒಬ್ಬ ವ್ಯಕ್ತಿ, ಒಂದು ಸ್ಥಳದ ಹೆಸರಾಗಿರಬಹುದು ಅಥವಾ ಒಂದು ಗುಂಪನ್ನು ಸೂಚಿಸುವ ಪದವಾಗಿರಬಹುದು ಅಥವಾ ಗುಣ, ಸ್ವಭಾವ, ಸಂಖ್ಯೆ, ಸ್ಥಾನ, ಅಳತೆ, ತೂಕ ಇತ್ಯಾದಿಗಳನ್ನು ಸೂಚಿಸುವ ಪದಗಳಾಗಿರಬಹುದು.ಅವನ್ನು ನಾಮಪದಗಳೆಂದು ಕರೆಯುತ್ತೇವೆ.

ನಾಮಪದಗಳನ್ನು ೧) ವಸ್ತುವಾಚಕ ಅಥವಾ ನಾಮವಾಚಕ ೨) ಗುಣವಾಚಕ ೩) ಪರಿಮಾಣವಾಚಕ ೪) ಪ್ರಕಾರವಾಚಕ ೫) ಸಂಖ್ಯಾವಾಚಕ ೬) ದಿಗ್ವಾಚಕ ೭) ಭಾವನಾಮಗಳೆಂದು ವಿಭಾಗಿಸಬಹುದು

೧. **ವಸ್ತುವಾಚಕ ಅಥವಾ ನಾಮವಾಚಕ –** ವಸ್ತುವಿಗಾಗಲಿ, ವ್ಯಕ್ತಿಗಾಗಲಿ ಒಂದು ಸ್ಥಳಕ್ಕಾಗಲಿ ಇರುವ ನಿರ್ದಿಷ್ಟ ಹೆಸರುಗಳನ್ನು ವಸ್ತುವಾಚಕಗಳೆನ್ನುವರು.

ನಾಮವಾಚಕಗಳಲ್ಲಿ ಮೂರು ವಿಧ. ಅವು ಯಾವುವೆಂದರೆ ಅ) ಅಂಕಿತನಾಮ ಆ) ಅನ್ವರ್ಥನಾಮ ಇ) ರೂಢನಾಮ.

ಅ) **ಅಂಕಿತನಾಮ :** ಒಂದು ವಸ್ತು, ಒಬ್ಬ ವ್ಯಕ್ತಿ, ಒಂದು ಸ್ಥಳಕ್ಕೆ ನಿರ್ದಿಷ್ಟವಾಗಿ ಹೆಸರನ್ನು ನೀಡಿರುವುದು.

ಉದಾಹರಣೆ: ವ್ಯಕ್ತಿ – ರಾಮನಾರಾಯಣ

ವಸ್ತು – ಕಲ್ಲು, ರಾಗಿ

ಸ್ಥಳ – ಬೀರಗಾನಳ್ಳಿ

ನದಿ – ಕಾವೇರಿ

ಬೆಟ್ಟ – ಶತಶೃಂಗ

ಆ) **ಅನ್ವರ್ಥನಾಮ:** ವಸ್ತುವಿನ ರೂಪ ವ್ಯಕ್ತಿಯ ಗುಣಲಕ್ಷಣಗಳನ್ನಾಧರಿಸಿ ಅಂದರೆ ಗುಣಾನುಸಾರಿಯಾಗಿ ಅಥವಾ ಅರ್ಥಾನುಸಾರ ನೀಡುವ ಹೆಸರುಗಳಿಗೆ ಅನ್ವರ್ಥನಾಮ ಎಂದು ಕರೆಯುತ್ತಾರೆ.
**ಉದಾಹರಣೆ :** ಜಾಣ, ಕವಿ, ಪಂಡಿತ, ಕುರುಡ, ಮೂಗ, ಕಿವುಡ, ದಡ್ಡ, ಬೆಪ್ಪ, ಶಿಕ್ಷಕ, ವಿಜ್ಞಾನಿ, ದಾನಿ, ಅಭಿಮಾನಿ, ನೀತಿಜ್ಞ, ಕುಂಟ, ಹೆಳವ, ಗಿಡ್ಡ, ಬೆಪ್ಪ, ಪೆದ್ದ, ಬುದ್ಧಿವಂತ, ಧೀರ, ಹೇಡಿ, ಕ್ರೂರಿ, ಸಾಧು, ಶ್ರೀಮಂತ, ಜಿಪುಣ, ಅಷ್ಟಾವಕ್ರ, ಸೊಗಸುಗಾತಿ, ಒರಟ, ಸಿಡುಕ, ಗೊಡ್ಡು, ತುಡುಗು.

ಇ) **ರೂಢನಾಮ:** ಅನಾದಿಕಾಲದಿಂದ ರೂಢಿಯಾಗಿ ಬಂದಿರುವ ಹೆಸರುಗಳನ್ನು ರೂಢನಾಮ ಎಂದು ಕರೆಯುತ್ತಾರೆ.
**ಉದಾಹರಣೆ:** ಹೆಂಗಸು, ಗಂಡಸು, ಹುಡುಗ, ಹುಡುಗಿ, ಮಕ್ಕಳು, ಜನರು, ನದಿ, ಬೆಟ್ಟ, ಸಮುದ್ರ, ಕೆರೆ, ಹಳ್ಳ, ಹಳ್ಳಿ, ಗಿಡ, ಮರ, ಹೊಳೆ, ಮುದುಕ–ಮುದುಕಿ, ಹೆಣ್ಣು, ಕಾಯಿ, ಊರು, ಪ್ರಾಣಿಗಳು, ಪಕ್ಷಿಗಳು, ಆಕಾಶ, ಮನೆ, ಕಿಟಕಿ, ಬಾಗಿಲು, ನಾಯಿ, ಎಲೆ–ಅಡಿಕೆ, ಹಸು, ಎಮ್ಮೆ, ಬಳ್ಳಿ.

೨. **ಗುಣವಾಚಕ:** ವಸ್ತುಗಳ, ವ್ಯಕ್ತಿಗಳ ಗುಣ, ರೀತಿ ಸ್ವಭಾವಗಳನ್ನು ತಿಳಿಸುವ ಪದಗಳಿಗೆ ಗುಣವಾಚಕಗಳೆನ್ನುವರು. ಸಿಹಿಯಾದ ಹಣ್ಣು, ದೊಡ್ಡ ನದಿ, ಒಳ್ಳೆಯ ಹುಡುಗಿ. ಇಲ್ಲಿ ಹಣ್ಣಿನ ರುಚಿ ನದಿಯ ಗಾತ್ರ, ಹುಡುಗಿಯ ವ್ಯಕ್ತಿತ್ವ ತಿಳಿಸುವ ಸಿಹಿ, ದೊಡ್ಡ, ಒಳ್ಳೆಯ ಪದಗಳೇ ಗುಣವಾಚಕಗಳು. ಇವುಗಳನ್ನು ವಿಶೇಷಣಗಳೆಂದೂ ಕರೆಯುವರು.
**ಉದಾಹರಣೆ:** ಬಿಳಿ, ಹಸಿ, ಕರಿ, ಹೊಸ, ಹಳೆ, ಎಳೆ, ಚಿಕ್ಕ, ದೊಡ್ಡ, ಪುಟ್ಟ, ಒಣ, ಚಿಕ್ಕವನು, ದೊಡ್ಡದು, ಒಳ್ಳೆಯವನು, ಒಳ್ಳೆಯವಳು, ಚಿಕ್ಕವಳು, ಚಿಕ್ಕವರು, ಚಿಕ್ಕದು.

**ಭಾವನಾಮ:** ವಸ್ತು ಅಥವಾ ವ್ಯಕ್ತಿಯ ಸ್ಥಿತಿ ಸ್ವರೂಪವನ್ನು ಹೇಳುವ ನಾಮಪದಗಳೇ ಭಾವನಾಮಗಳು. ಭಾವ ಎಂದರೆ ಇರುವಿಕೆ, ಸ್ಥಿತಿ ಎಂದು ಅರ್ಥೈಸಬಹುದು.

ಉದಾಹರಣೆ: ೧) ಬಿಳಿಯದರ ಭಾವ ಬಿಳುಪು

೨) ಕರಿಯದರ ಭಾವ ಕಪ್ಪು

೩) ಆಡುವುದರ ಭಾವ ಆಟ

೪) ನೋಡುವುದರ ಭಾವ ನೋಟ

ಕ್ರಿಯಾ ಪದಗಳ ಸ್ಥಿತಿ ರೂಪವನ್ನು ಭಾವನಾಮಗಳು ಸೂಚಿಸುತ್ತವೆ. ಆಡು, ಓಡು, ತಿಳಿ, ಮುಂತಾದ ಧಾತುಗಳ ಸ್ಥಿತಿಯನ್ನು ಆಟ, ಓಟ, ತಿಳುವಳಿಕೆ ಎಂದು ಹೇಳುತ್ತೇವೆ.

**ಸರ್ವನಾಮ:** ನಾಮಪದಕ್ಕೆ ಬದಲಾಗಿ ಅದೇ ಅರ್ಥ ಬರುವಂತೆ ಬಳಸುವ ಪದಗಳಿಗೆ ಸರ್ವನಾಮಗಳೆನ್ನುವರು.

**ಉದಾಹರಣೆ**: ರಾಮನು ಸೀತೆಯೊಡನೆ ನಾಡಿಗೆ ಬಂದನು. ಅವನು ಮತ್ತೆ ಸೀತೆಯನ್ನು ಕಾಡಿಗೆ ಕಳುಹಿಸಿದನು. ಈ ವಾಕ್ಯದಲ್ಲಿ ಅವನು ಎನ್ನುವ ಪದವೇ ಸರ್ವನಾಮ. ಈ ಪದ ಬಳಕೆ ಆಗಿರುವುದು ರಾಮ ಎನ್ನುವ ಪದಕ್ಕೆ ಬದಲಾಗಿ.

ಸರ್ವ ನಾಮಗಳನ್ನು ಪುರುಷವಾಚಕ ಸರ್ವನಾಮಗಳು, ಆತ್ಮಾರ್ಥಕ ಸರ್ವನಾಮಗಳು, ಪ್ರಶ್ನಾರ್ಥಕ ಸರ್ವನಾಮಗಳೆಂದು ಮೂರು ಭಾಗಗಳಾಗಿ ವಿಂಗಡಿಸಬಹುದು.

೧. **ಪುರುಷವಾಚಕ –** ಸಂಭಾಷಣೆಯಲ್ಲಿ ತೊಡಗಿರುವ ವ್ಯಕ್ತಿ ತನಗೆ ಸೂಚಿಸಿಕೊಳ್ಳುವ ಸರ್ವನಾಮವು ಉತ್ತಮ ಪುರುಷ – **ನಾನು**

ತಾನು ಎದುರಿಗೆ ಇರುವ ವ್ಯಕ್ತಿಯನ್ನು ನಿರ್ದೇಶಿಸುವ ಪದವು ಮಧ್ಯಮ ಪುರುಷ – **ನೀನು.**

ಎದುರಿಗೆ ಇಲ್ಲದ ಬೇರೆಲ್ಲಿಯೋ ಇರುವ ವ್ಯಕ್ತಿಯನ್ನು ನಿರ್ದೇಶಿಸುವ ಪದವು ಪ್ರಥಮ ಪುರುಷ–**ಅವನು.**

# ೫. ಅವರು ಮತ್ತು ನಾವು

– ಟಿ. ಯಲ್ಲಪ್ಪ

**ಪ್ರವೇಶ ಮತ್ತು ಆಶಯ**

ನವ್ಯೋತ್ತರ ಕನ್ನಡ ಕಾವ್ಯದ ಸಂದರ್ಭದಲ್ಲಿ ಬಂಡಾಯ ಮತ್ತು ದಲಿತ ಸಾಹಿತ್ಯ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಸಮಾಜದ ದುರ್ಬಲ ಹಾಗೂ ಶೋಷಿತರ ಮೇಲಿನ ಅನ್ಯಾಯಗಳನ್ನು ಈ ಸಾಹಿತ್ಯವು ಪ್ರತಿಭಟಿಸಿದೆ.

'ಅವರು ಮತ್ತು ನಾವು' ಎಂಬ ಈ ಕವಿತೆಯಲ್ಲಿ ಸಮಾಜದ ಎರಡು ವರ್ಗಗಳಲ್ಲಿ ಕಂಡು ಬರುವ ವೈರುಧ್ಯಗಳನ್ನು ಗುರುತಿಸಬಹುದು.

ನಾವು ತಿನ್ನುವುದಕ್ಕೆ
ಅನ್ನ ಕೇಳಿದೆವು
ಅವರು ಹುಳ ಬಿದ್ದ
ಅಕ್ಕಿ ಕೊಟ್ಟರು
ನಾವು ಹುಳ ದೇವರಿಗೆ ಕೊಟ್ಟು
ಅಕ್ಕಿಯನ್ನು ಕಣ್ಣಿಗೊತ್ತಿಕೊಂಡು
ಅನ್ನ ಮಾಡಿ ಉಂಡೆವು !

ಈಗ
ಅವರು ತಿನ್ನುವ ಅನ್ನಕ್ಕೇ
ಹುಳ ಬಿದ್ದಿದೆ
ಅವರು ಹುಳುಗಳನ್ನು
ನಿಷ್ಕಾರುಣ್ಯವಾಗಿ ಕೊಂದುಬಿಟ್ಟು
ಅನ್ನಕ್ಕಾಗಿ ದೇವರಿಗೇ
ಕೈ ಚಾಚುತ್ತಿದ್ದಾರೆ!

ಸಾಯುವಾಗ
ನಾವು ಕುಡಿಯುವುದಕ್ಕೆ
ನೀರು ಕೇಳಿದೆವು
ಅವರು ಆಕಾಶದಲ್ಲಿ ನಿಂತು
ಪಾತಾಳಕ್ಕೆ ನೀರು ಸುರಿದರು
ಸುರಿದ ನೀರಲ್ಲಿ
ನಾವು ದಣಿವಾರಿಸಿಕೊಂಡು
ಉಳಿದ ನೀರಲ್ಲಿ
ಕಣ್ಣೀರ ತೊಳೆದುಕೊಂಡೆವು





ಈಗ
ಅವರಿಗೆ ಸಾಯುವಾಗ
ಬಾಯಲ್ಲಿ ನೀರು ಬಿಡುವವರಿಲ್ಲ
ಅವರು ಸಾಕಿ ಸಲಹಿದ ಮಕ್ಕಳು
ಆಕಾಶದಲ್ಲಿ ಹಾರಿ
ದೂರ ದೇಶ ಸೇರಿದ್ದಾರೆ
ಅವರ ನೆನಪಿನಲ್ಲಿಯೇ ಇವರು
ಕಣ್ಣೀರು ಸುರಿಸುತ್ತಾ
ಪಾತಾಳಕ್ಕೆ ಇಳಿದು ಹೋಗಿದ್ದಾರೆ!

ನಮಗೇನಾದರೂ ಕೊಡುತ್ತಲೇ
ನಮ್ಮಗಳ
ಜೀವ, ಮಾನ, ಪ್ರಾಣಗಳ
ಉಳಿಸಿದ ಅವರ
ನಾವು ಶಪಿಸುವುದೂ ತರವಲ್ಲ!
ಮಾನವನೆದೆ ಬರಡೇನಲ್ಲ
ಪ್ರೀತಿ ಪ್ರೇಮಗಳ
ದವಸ ತುಂಬಿದ ಕಣಜ
ಹಂಚಿ ಉಟ್ಟುಣ್ಣುವ
ಸುಖದ ನಿಜ
ತಿಳಿಯಬೇಕಿದೆ ಮನುಜ!

**ಕವಿ–ಕಾವ್ಯ ಪರಿಚಯ:**



ಅಕ್ಟೋಬರ್ ೨, ೧೯೭೦ ರಂದು ಜನಿಸಿದ ಟಿ.ಯಲ್ಲಪ್ಪ ಬೆಂಗಳೂರು ವಿಶ್ವವಿದ್ಯಾಲಯದಿಂದ ಎಂ.ಎ. ಮತ್ತು ಎಂ.ಫಿಲ್ ಪದವಿಯನ್ನು ಪಡೆದಿದ್ದಾರೆ. ಇಪ್ಪತ್ತೆರಡರ ಅಳಲು ಇವರ ಪ್ರಬಂಧ ಸಂಕಲನ ಹಾಗೂ ಕಡಲಿಗೆ ಕಳಿಸಿದ ದೀಪ ಇವರ ಕವನ ಸಂಕಲನ.

ಇವರಿಗೆ ೨೦೦೮ರ 'ನಾಡೋಜ ಚೆನ್ನವೀರ ಕಣವಿ' ಪ್ರಶಸ್ತಿ, ಸಂಕ್ರಮಣ ಕಾವ್ಯ ಸ್ಪರ್ಧೆಯ ಬಹುಮಾನ, ಸಂಚಯ ಸಾಹಿತ್ಯ ಸ್ಪರ್ಧೆಯ ಬಹುಮಾನ, 'ಕಡಲಿಗೆ ಕಳಿಸಿದ ದೀಪ' ಕೃತಿಗೆ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ೨೦೦೮ನೇ ಸಾಲಿನ ಜಿ.ಎಸ್.ಶಿವರುದ್ರಪ್ಪ ಕಾವ್ಯ ಪ್ರಶಸ್ತಿ ಲಭಿಸಿದೆ. ಸಮಕಾಲೀನ ಸಂದರ್ಭದ ಜ್ವಲಂತ ಸಮಸ್ಯೆಗಳನ್ನು ಸಮರ್ಥವಾಗಿ ಅಭಿವ್ಯಕ್ತಿಗೊಳಿಸುವ ಟಿ.ಯಲ್ಲಪ್ಪನವರ 'ಚಿಟ್ಟೆ ಮತ್ತು ಜೀವಯಾನ' ಕವನ ಸಂಕಲನದಿಂದ ಈ ಪ್ರಸ್ತುತ ಕವಿತೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

**ಓದಿ ತಿಳಿಯಿರಿ:**

ಕಣ್ಣಿಗೊತ್ತಿಕೊ – ಪವಿತ್ರ ಭಾವನೆಯನ್ನು ಹೊಂದು, ನಿಷ್ಕಾರುಣ್ಯ – ಕರುಣೆ ಇಲ್ಲದಿರುವಿಕೆ, ಕೈ ಚಾಚು – ಬೇಡು, ಪಾತಾಳ – ಭೂಮಿಯ ಕೆಳಗಡೆ ಇದೆ ಎಂದು ಭಾವಿಸಲಾಗಿರುವ ಮತ್ತೊಂದು ಲೋಕ, ದಣಿವು – ಆಯಾಸ, ಶಪಿಸು – ಶಾಪಹಾಕು, ಬರಡು – ನಿಸ್ಸಾರ, ಗೊಡ್ಡು, ಮನುಜ – ಮನುಷ್ಯ.

**ವಿಶೇಷೋಕ್ತಿಗಳು:**

ಕಣ್ಣಿಗೊತ್ತಿಕೊ, ಕೈಚಾಚು, ನೀರುಬಿಡು, ಸಾಕಿ ಸಲಹು, ಆಕಾಶದಲ್ಲಿ ಹಾರು, ಪಾತಾಳಕ್ಕೆ ಇಳಿ, ಉಟ್ಟುಣ್ಣು.



## ಅಭ್ಯಾಸ

**ಅ. ಖಾಲಿ ಜಾಗವನ್ನು ಸೂಕ್ತ ಪದಗಳಿಂದ ತುಂಬಿರಿ:**

೧. ಅವರು ________ ಅಕ್ಕಿ ಕೊಟ್ಟರು

೨. ಅನ್ನಕ್ಕಾಗಿ ________ ಕೈಚಾಚುತ್ತಿದ್ದಾರೆ.

೩. ನಾವು ________ ನೀರು ಕೇಳಿದೆವು.

೪. ಪಾತಾಳಕ್ಕೆ ________ ಹೋಗಿದ್ದಾರೆ.

**ಆ. ಸ್ವಂತ ವಾಕ್ಯದಲ್ಲಿ ಬರೆಯಿರಿ:**

೧. ತಿನ್ನುವ ಅನ್ನ, ೨. ನೀರು ಕೇಳು, ೩. ದೂರ ದೇಶ

**ಇ. ಒಂದು ವಾಕ್ಯದಲ್ಲಿ ಉತ್ತರ ಬರೆಯಿರಿ:**

೧. ಅವರು ಕೊಟ್ಟ ಅಕ್ಕಿ ಯಾವುದು?

೨. ಅವರು ನೀರನ್ನು ಹೇಗೆ ಸುರಿದರು?

೩. ತಿನ್ನುವ ಅನ್ನಕ್ಕೆ ಏನು ಬಿದ್ದಿದೆ?

೪. ದಣಿವಾರಿಸಿಕೊಂಡವರು ಯಾರು?

**ಈ. ಎರಡು / ಮೂರು ವಾಕ್ಯಗಳಲ್ಲಿ ಉತ್ತರ ಬರೆಯಿರಿ:**

೧. 'ನಾವು' ಕೇಳಿದ್ದು ಏನನ್ನು?

೨. 'ಅವರು' ಏನನ್ನು ಕೊಟ್ಟದ್ದು?

೩. ಅವರು, ನಾವು ಎಂದರೆ ಯಾರು, ಯಾರು?

೪. ಅವರು ದೇವರಿಗೆ ಏಕೆ ಕೈ ಚಾಚುತ್ತಾರೆ?

**ಉ. ಐದು / ಆರು ವಾಕ್ಯಗಳಲ್ಲಿ ಉತ್ತರಿಸಿರಿ:**

೧. ಅವರು ಮತ್ತು ನಾವು – ಇವರುಗಳಲ್ಲಿರುವ ವೈರುಧ್ಯಗಳು ಯಾವುವು?

೨. ಅವರು ಮತ್ತು ನಾವು – ಇವರ ಬದುಕು ಹೇಗೆ ಭಿನ್ನವಾಗಿವೆ?

**ಊ. ಸಂದರ್ಭದೊಡನೆ ವಿವರಿಸಿ:**

೧. ಅವರು ತಿನ್ನುವ ಅನ್ನಕ್ಕೆ ಹುಳ ಬಿದ್ದಿದೆ.

೨. ನಾವು ಕುಡಿಯುವುದಕ್ಕೆ ನೀರು ಕೇಳಿದೆವು.

೩. ಉಳಿದ ನೀರಲ್ಲಿ ಕಣ್ಣೀರ ತೊಳೆದುಕೊಂಡೆವು.

**ಋ. ಬಿಡಿಸಿ ಬರೆಯಿರಿ:**

ಕಣ್ಣಿಗೊತ್ತಿಕೊ, ಅನ್ನಕ್ಕಾಗಿ, ಆಕಾಶದಲ್ಲಿ

**ಚಟುವಟಿಕೆ**

ದೇವನೂರ ಮಹಾದೇವ, ಸಿದ್ಧಲಿಂಗಯ್ಯ – ಇವರನ್ನು ಕುರಿತ ಮಾಹಿತಿ ಸಂಗ್ರಹಿಸಿರಿ.

# ೬. ಪ್ರೊಫೆಸರ್ ಕರೀಮುದ್ದೀನ್ ಸಾಹೇಬರು

– ಅಬ್ದುಲ್ ರಶೀದ್

**ಪ್ರವೇಶ ಮತ್ತು ಆಶಯ**

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅಂಕಣ ಬರೆಹ ವಿಶಿಷ್ಟವಾದದ್ದು. ನಮ್ಮ ಸುತ್ತಮುತ್ತಲಿನ ಸನ್ನಿವೇಶಗಳು, ಘಟನೆಗಳು, ವೈಚಾರಿಕತೆ, ವ್ಯಕ್ತಿ ಚಿತ್ರ ಇತ್ಯಾದಿ ವಿಷಯಗಳನ್ನು ನೈಜವಾಗಿ ಬಿಡಿ, ಬಿಡಿಯಾಗಿ ವಿವರಿಸುವುದೇ ಅಂಕಣ ಬರೆಹದ ಉದ್ದೇಶವಾಗಿರುತ್ತದೆ.

ಈ ದಿಸೆಯಲ್ಲಿ ಎಚ್.ಎಸ್.ಕೃಷ್ಣಸ್ವಾಮಿ ಅಯ್ಯಾಂಗಾರ್, ಹಾ.ಮಾ.ನಾಯಕರು ಅಂಕಣ ಬರೆಹವನ್ನು ಒಂದು ಸಾಹಿತ್ಯ ಪ್ರಕಾರವಾಗಿ ರೂಪಿಸಿದರು. ಇದೇ ಜಾಡಿನಲ್ಲಿ ಸಾಗಿರುವ ಮತ್ತೊಬ್ಬ ಪ್ರಮುಖ ಅಂಕಣ ಬರೆಹಗಾರರಾದ ಅಬ್ದುಲ್ ರಶೀದ್‌ರವರ ಅಂಕಣ ಬರೆಹದ ಸ್ವಾರಸ್ಯವನ್ನು ಪರಿಚಯಿಸುವುದು ಈ ಭಾಗದ ಆಶಯವಾಗಿದೆ.

'ಹಿಂದೂಸ್ತಾನದ ರಾಜಮಹಾರಾಜರುಗಳು ಅದು ಹೇಗೆ ಅಷ್ಟು ಸುಲಭದಲ್ಲಿ ಬ್ರಿಟಿಷ್ ದೊರೆಗಳ ಕೈಯಲ್ಲಿ ಸೋತು ಹೋದರು ಗೊತ್ತಾ?...'

ಪ್ರೊಫೆಸರ್ ಕರಿಮುದ್ದೀನ್ ಸಾಹೇಬರು ಶ್ರೀರಂಗಪಟ್ಟಣದ ಗಂಜಾಂನಲ್ಲಿರುವ ಟಿಪ್ಪುಸುಲ್ತಾನ್ ಹೈದರಾಲಿಗಳ ಸಮಾಧಿಯ ಮುಂದಿರುವ ಸುಂದರ ಉದ್ಯಾನವನದಲ್ಲಿ ನಡೆಯುತ್ತ ನಡುವೆ ಹಿಂತಿರುಗಿ ನನ್ನತ್ತ ನೋಡಿ ಪುಟ್ಟ ಬಾಲಕನಂತೆ ನಕ್ಕರು.

ನಾನು ಗೊತ್ತಿಲ್ಲವೆಂಬಂತೆ ಅವರತ್ತ ನೋಡಿದೆ.



'ಎಲ್ಲಾ ಈ ಆನೆಗಳ ದೆಸೆಯಿಂದ. ಈ ರಾಜಮಹಾರಾಜರುಗಳಿಗೆ ಯಾವಾಗಲೂ ಆನೆಗಳ ಮೇಲೆಯೇ ಸವಾರಿ ಹೋಗಬೇಕು. ಆನೆಗಳನ್ನು ಬಿಟ್ಟು ಕೆಳಗಿಳಿಯಬಾರದು. ಅರಮನೆಗೆ ಹೋಗುವಾಗಲೂ ಆನೆ. ಮಸೀದಿಗೆ ಹೋಗುವಾಗಲೂ ಆನೆ. ಕೋಟೆಯನ್ನು ಪ್ರವೇಶಿಸುವಾಗಲೂ ಆನೆ. ಇವರು ಆನೆಯ ಮೇಲೆ ರಾಜಗಾಂಭೀರ್ಯದಲ್ಲಿ ನಿಧಾನವಾಗಿ ಚಲಿಸುವಾಗ ಬ್ರಿಟಿಷರು ಕುದುರೆಗಳ ಮೇಲೆ ವೇಗವಾಗಿ ಬಂದು ಸಾಮ್ರಾಜ್ಯಗಳನ್ನು ವಶಪಡಿಸಿಕೊಂಡರು. ಹೋಗಲಿ ಈ ರಾಜರುಗಳು ಕೋಟೆಗಳ ಬಾಗಿಲುಗಳನ್ನಾದರೂ ಸಣ್ಣದಾಗಿ ನಿರ್ಮಿಸಬಾರದಾ? ಆನೆಗಳು ಹೋಗಿಬರಲು ಅವುಗಳನ್ನೂ ಅಗಲವಾಗಿ ಮಾಡಿದರು. ಬ್ರಿಟಿಷ್ರಿಗೆ ಇನ್ನೇನು ಬೇಕು? ಎಲ್ಲವನ್ನು ವೇಗವಾಗಿ ನುಂಗಿ ನೀರು ಕುಡಿದರು.'

ಪ್ರೊಫೆಸರ್ ಕರೀಮುದ್ದೀನ್ ಸಾಹೇಬರು ಹೇಳುತ್ತಾ ಕೊನೆಯಲ್ಲಿ ಇನ್ನೊಮ್ಮೆ ನಕ್ಕರು. ನಾನು ಇವರು ಹೇಳಿದ ಕಾರಣವನ್ನು ಮೊದಲು ನಂಬದಿದ್ದರೂ ಆಮೇಲೆ ನನಗೆ ಗೊತ್ತಿರುವ ಎಲ್ಲಾ ಕೋಟೆಗಳ ಬಾಗಿಲುಗಳನ್ನೂ ನೆನಪು ಮಾಡಿಕೊಂಡೆ. ಹೌದು. ಅವುಗಳು ಬಹುತೇಕ ಕರೀಮುದ್ದೀನ್ ಸಾಹೇಬರು ಹೇಳಿದ ಹಾಗೆ ಆನೆಗಳು ಹೋಗಲೆಂದೇ ಮಾಡಿದ ಹಾಗಿತ್ತು. ಅವರ ಮಾತುಗಳು ಪೂರ್ತಿ ನಿಜವಲ್ಲದಿದ್ದರೂ ಕೇಳಲು ತುಂಬಾ ಸಕಾರಣವಾಗಿತ್ತು.

'ಕರೀಮುದ್ದೀನ್ ಸಾಹೇಬರೇ ನೀವು ಟಿಪ್ಪುಸುಲ್ತಾನರ ಕಾಲದಿಂದಲೂ ಅರೇಬಿಕ್ ವಿದ್ವಾಂಸರ ಕುಟುಂಬಕ್ಕೆ ಸೇರಿದವರು. ಅದು ಹೇಗೆ ನೀವು ಕನ್ನಡ ಶಾಲೆಗೆ ಹೋಗಿ ಕನ್ನಡ ಎಂ.ಎ. ಮಾಡಿ ಕನ್ನಡದ ಪ್ರೊಫೆಸರ್ ಆಗಿ ನಿವೃತ್ತರಾದಿರಿ?' ಎಂದು ಕೇಳಿದೆ. ಅದಕ್ಕೆ ಅವರು ತಮ್ಮ ಜೀವನದ ಕಥೆ ಹೇಳಿದರು.

ಮೊನ್ನೆ ಯುಗಾದಿಯ ಮಾರನೆಯ ದಿನ, ಶ್ರೀರಂಗಪಟ್ಟಣದ ಬಳಿಯ ಗಂಜಾಂ ಎಂಬ ಪ್ರದೇಶದ ಕಾವೇರಿ ನದಿಯ ತೀರದಲ್ಲಿರುವ ಸುಮಾರು ನೂರಿಪ್ಪತ್ತು ವರ್ಷಗಳಷ್ಟು ಹಳೆಯ ವೆಲ್ಲೂರು ಮಾದರಿಯ ಹಳೆಯ ಹಂಚಿನ ಮನೆಯ ಎದುರಿನ ಕಲ್ಲು ಹಾಸಿನಲ್ಲಿ ಕುಳಿತು ಎಪ್ಪತ್ತನಾಲ್ಕು ವರ್ಷದ ಕರೀಮುದ್ದೀನ್ ಸಾಹೇಬರು ತಮ್ಮ ಕಥೆ ಹೇಳಿ ಮುಗಿಸಿದರು. ಬಹುಶಃ ಆ ಕಥೆಯ ಕೊನೆಯಲ್ಲಿ ಕತ್ತಲಲ್ಲಿ ಕಣ್ಣೀರು ಒರೆಸಿಕೊಂಡು ನನ್ನನ್ನು ಬೀಳುಕೊಂಡರು.

ಈ ಕಥೆಯಲ್ಲಿ ಟಿಪ್ಪೂಸುಲ್ತಾನ ಬರುತ್ತಾನೆ. ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪನವರು ಬರುತ್ತಾರೆ. ಮಿಲ್ಟನ್ನನ ಪ್ಯಾರಡೈಸ್ಲಾಸ್ಟ್ ಬರುತ್ತದೆ. ಏಸುಕ್ರಿಸ್ತ ಬರುತ್ತಾನೆ. ಮಾವಿದ್ ವಿಷಾವ ಹೈ ಎಂಬ ಸಂಸ್ಕೃತ ಶ್ಲೋಕ ಬರುತ್ತದೆ. ನೂರುನ್ ಅಲಾನೂರ್ ಎಂಬ ಕುರಾನಿನ ವಾಕ್ಯ ಬರುತ್ತದೆ. ನಕ್ಸಲೈಟರು ಬರುತ್ತಾರೆ. ಹನ್ನೆರಡುವರ್ಷದ ಒಂದು ಬೆಕ್ಕು, ಒಂದು ಪುಟ್ಟ ನಾಯಿಮರಿ, ನಕ್ಸಲರ ದಾಳಿಯಲ್ಲಿ ಹತನಾದ ಕರೀಮುದ್ದೀನರ ಸಾಕುಮಗಳ ಗಂಡನ ತಬ್ಬಲಿ ಮಕ್ಕಳು ಈ ಕಥೆ ಹೇಳಿ ಮುಗಿದ ಮೇಲೂ ಕಾವೇರಿಯ ಅಂಗಳದ ಆ ಹಳೆಯ ಮನೆಯ ಅಂಗಳದಲ್ಲಿ ಆಟವಾಡುತ್ತಿರುತ್ತಾರೆ. ನಾನು ಇನ್ನು ಉಳಿದಿರುವ ಆರು ನೂರು ಪದಗಳಲ್ಲಿ ಪ್ರೊಫೆಸರ್ ಕರೀಮುದ್ದೀನರ ಕಥೆ ಹೇಳಿ ಮುಗಿಸಲು ನೋಡುತ್ತೇನೆ.

ಪ್ರೊಫೆಸರ್ ಕರೀಮುದ್ದೀನ್ ಸಾಹೇಬರ ಮುತ್ತಾತಂದಿರಾದ ಮಹಮದ್ ಉಮಾರ್ಸಾಹೇಬ್ ಮತ್ತು ಮಹಮದ್ ಇಬ್ರಾಹಿಂ ಸಾಹೇಬ್ ಎಂಬ ಸೋದರರು ಟಿಪ್ಪೂಸುಲ್ತಾನನಿಗೆ ಭಾವಮೈದುನರಾಗಿದ್ದರು. ಈಸ್ಟ್ ಇಂಡಿಯಾ ಕಂಪೆನಿಯ ಕೈಯಲ್ಲಿ ಟಿಪ್ಪೂ ಪತನಗೊಂಡ ನಂತರ ಬ್ರಿಟಿಷರ ಸೆರೆಯಾಳುಗಳಾಗಿ ಇವರು ಸಂಸಾರ ಸಮೇತ ತಮಿಳುನಾಡಿನ ವೆಲ್ಲೂರಿನಲ್ಲಿ ಬಂಧನದಲ್ಲಿದ್ದರು. ಬಂಧಿಗಳಾಗಿದ್ದ ಇವರಿಗೆ ಬ್ರಿಟಿಷ್ ಸರಕಾರ ೫೦೦ ರೂಪಾಯಿಗಳ ರಾಜಬತ್ತೆಯನ್ನೂ ನಿಗಧಿ ಮಾಡಿತ್ತು. ಆದರೆ ರಾಜಬತ್ತೆಗಿಂತ ಶ್ರೀರಂಗಪಟ್ಟಣದಲ್ಲಿರುವ ಟಿಪ್ಪೂ ಹಾಗೂ ಹೈದರರ ಸಮಾಧಿಯ ಸೇವೆ ಸಲ್ಲಿಸುವುದೇ ಮೇಲು ಎಂದುಕೊಂಡ ಈ ಮುತ್ತಾತರಲ್ಲಿ ಒಬ್ಬರು ದಿವಾನ್ ಪೂರ್ಣಯ್ಯನವರಲ್ಲಿ ಕೇಳಿಕೊಂಡು ದರ್ಗದ ಪರಿಚಾರಕರಾಗಿ ಸೇರಿಕೊಂಡರು. ಅವರ ಕಾಲಾನಂತರ ಅವರ ಮಗ ಮಹಮದ್ ಗೌಸ್ ಸಾಹೇಬರು ೫೦ ವರ್ಷ, ಅವರ ತಮ್ಮ ಮಹಮದ್ ಹುಸೈನ್ ಸಾಹೇಬರು ೪೪ ವರ್ಷ, ಗೌಸ್ ಸಾಹೇಬರ ಮಗ ಕರೀಮುದ್ದೀನ್ ಸಾಹೇಬರು ೫೭ ವರ್ಷ ಸೇವೆ ಸಲ್ಲಿಸಿದರು.

ಕರೀಮುದ್ದೀನ್ ಸಾಹೇಬರ ಮಗ ಹಕೀಂ ಅಬ್ದುಲ್ ಅಲೀಂ ಎನ್ನುವವರು ಈಗ ಪಾಂಡವಪುರ ಎಂದು ಕರೆಯಲ್ಪಡುವ ಫ್ರೆಂಚ್‌ರಾಕ್ಸ್ ಎಂದು ಕರೆಯಲ್ಪಡುತ್ತಿದ್ದ ನಗರದಲ್ಲಿದ್ದ ವಿಭಾಗೀಯ ಅಧಿಕಾರಿಗಳಿಗೆ ಪತ್ರವೊಂದನ್ನು ಬರೆದು ತಮ್ಮನ್ನು ದಯವಿಟ್ಟು ಪುನಃ ದರ್ಗಾದ ಮೇಲ್ವಿಚಾರಕನನ್ನಾಗಿ ನೇಮಿಸಬೇಕೆಂದೂ, ತಮ್ಮ ಸ್ಥಿತಿ ಬಹಳ ದಯನೀಯವಾಗಿರುವುದೆಂದೂ ರೋಗಿಗಳಿಗೆ ಯುನಾನಿ ಔಷಧಿಗಳನ್ನು ಉಚಿತವಾಗಿ ನೀಡುತ್ತಿದ್ದ ತಮಗೆ ಶ್ರೀರಂಗಪಟ್ಟಣದ ಪುರಸಭೆ ನೀಡುತ್ತಿದ್ದ ಹತ್ತು ರೂಪಾಯಿಗಳ ತಿಂಗಳ ಭತ್ಯೆಯೂ ನಿಂತು ಹೋಗಿದೆಯೆಂದೂ ತಮ್ಮನ್ನು ಕಡೇ ಪಕ್ಷ ಮಸೀದಿಯಲ್ಲಿ ಕುರಾನು ಪಠಿಸುವ ಕೆಲಸಕ್ಕಾದರೂ ನೇಮಿಸಬೇಕೆಂದೂ ಬೇಡಿಕೊಂಡಿದ್ದರು. ಆದರೆ ಕೆಲಸ ಖಾಲಿ ಇಲ್ಲದ ಕಾರಣದಿಂದಾಗಿ ವಿಭಾಗಾಧಿಕಾರಿಗಳು ಅವರ ಅರ್ಜಿಯನ್ನು ತಿರಸ್ಕರಿಸಿದ್ದರು. ಪ್ರೊಫೆಸರ್ ಕರೀಮುದ್ದೀನ್ ಸಾಹೇಬರು ಈ ಹಕೀಂ ಸಾಹೇಬರ ಕಿರಿಯ ಮಗ. ಅವರ ಬಳಿ ಈ ಅರ್ಜಿಯ ನಕಲು ಪ್ರತಿ ಈಗಲೂ ಇದೆ.

ತಂದೆಯವರು ತೀರಿ ಹೋದಾಗ ಕರೀಮುದ್ದೀನರಿಗೆ ಆರು ವರ್ಷ. ಮೂರೂವರೆ ಮೈಲಿ ಉದ್ದ, ಎರಡೂವರೆ ಮೈಲಿ ಅಗಲವಿರುವ ಸುಂದರ ದ್ವೀಪವಾದ ಶ್ರೀರಂಗಪಟ್ಟಣದ ಜನಸಾಮಾನ್ಯರು ಬದುಕುವ ಗಂಜಾಂ ಎಂಬ ಪ್ರದೇಶದ ಶುಕ್ರವಾರ ಪೇಟೆ ಬೀದಿಯಲ್ಲಿ ಇರುವ ಆ ಮನೆಯೂ ಈಗಲೂ ಹಾಗೇ ಇದೆ. ಕರೀಮುದ್ದೀನರ ಒಬ್ಬ ಅಣ್ಣನಿಗೆ ಹುಚ್ಚು ಹಿಡಿದಿತ್ತು. ಆತ ಹುಚ್ಚಿನಲ್ಲೇ ತೀರಿಹೋದ. ಅಕ್ಕಂದಿರಲ್ಲಿ ಒಬ್ಬರು ಕ್ಯಾನ್ಸರ್ ತಗುಲಿ ಅವಿವಾಹಿತರಾಗಿಯೇ ತೀರಿಹೋದರು. ವಿವಾಹಿತರಾಗಿ ಆರು ಮಕ್ಕಳನ್ನು ಹೊಂದಿದ್ದ ಅಣ್ಣ ಕೆಲಸದ ಸ್ಥಳದಲ್ಲಿ ಆದ ಅವಮಾನ ಸಹಿಸಲಾರದೆ ಕಾವೇರಿ ನದಿಗೆ ಹಾರಿ ಪ್ರಾಣ ಕಳಕೊಂಡರು. ಆ ದುಃಖದಲ್ಲಿ ತಾಯಿಗೂ ಮತಿಭ್ರಮಣೆಯಾಯಿತು.

ಆ ತಾಯಿ, ಅಣ್ಣನ ಸಂಸಾರ, ಕಾಯಿಲೆಯ ತಂಗಿ ಇವರೆಲ್ಲರನ್ನು ಸಂಭಾಳಿಸಿ ಮುಗಿಯದೆ ಪ್ರೊಫೆಸರ್ ಕರೀಮುದ್ದೀನರು ಈಗಲೂ ಅವಿವಾಹಿತರಾಗಿಯೇ ಉಳಿದಿದ್ದಾರೆ. ಅವರ ಜೊತೆಗೆ ಕಳೆದ ಹನ್ನೆರಡು ವರ್ಷಗಳಿಂದ ಬೆಕ್ಕೊಂದು ಬದುಕುತ್ತಿದೆ. ಅದು ಸದಾಕಾಲ ಅವರ ಜೊತೆ ಇರುತ್ತದೆ. ಅವರು ಎಲ್ಲಾದರೂ ಮೈಸೂರಿಗೋ, ಮಂಡ್ಯಕ್ಕೋ ಉಪನ್ಯಾಸ ಮಾಡಲು ಹೋದರೆ ಅದು ಅವರ ಒಂಟಿ ಕೋಣೆಯ ಮುಚ್ಚಿದ ಬಾಗಿಲ ಮುಂದೆ ಶತಪಥ ಹಾಕುತ್ತಾ ಇರುತ್ತದೆ.

ಕರೀಮುದ್ದೀನರು ತಮ್ಮ ಅಣ್ಣನ ಮಗಳಲ್ಲಿ ಒಬ್ಬಾಕೆಯನ್ನು ಆಂಧ್ರಕ್ಕೂ, ಇನ್ನೊಬ್ಬಾಕೆಯನ್ನು ಪಾವಗಡಕ್ಕೂ ಮದುವೆ ಮಾಡಿಸಿ ಕಳಿಸಿದ್ದರು. ಅದರಲ್ಲಿ ಪಾವಗಡದಾಕೆಯ ಗಂಡನನ್ನು ಮೋಟಾರು ಬೈಕಿನಲ್ಲಿ ಹೋಗುತ್ತಿರುವಾಗ ಕ್ರಾಂತಿಕಾರಿಗಳು ಕೊಂದು ಹಾಕಿದ್ದಾರೆ. ಈಗ ಆಕೆಯ ಮಕ್ಕಳೂ ಆ ಬೆಕ್ಕಿನ ಜೊತೆಯಲ್ಲಿ ಕರೀಮುದ್ದೀನರ ಬಳಿ ಆಟವಾಡಿಕೊಂಡಿರುತ್ತವೆ.

ಹಾಗೆ ನೋಡಿದರೆ ೧೯೪೭ರಲ್ಲಿ ದೇಶ ವಿಭಜನೆಯಾದಾಗ ಕರೀಮುದ್ದೀನರ ಕುಟುಂಬದವರು ಪಾಕಿಸ್ತಾನಕ್ಕೋ ಬಾಂಗ್ಲಾದೇಶಕ್ಕೋ ವಲಸೆ ಹೋಗಬೇಕಾಗಿತ್ತು. ಏಕೆಂದರೆ ಪರಿಸ್ಥಿತಿಯೇ ಹಾಗಿತ್ತು. ಕರೀಮುದ್ದೀನರು ಆಗ ಮೈಸೂರಿನ ಮಹಾರಾಜಾ ಶಾಲೆಯಲ್ಲಿ ಹೈಸ್ಕೂಲು ಓದುತ್ತಿದ್ದರು. ಬೆಳಿಗ್ಗೆ ಎದ್ದು ಶ್ರೀರಂಗಪಟ್ಟಣದ ರೈಲು ನಿಲ್ದಾಣದವರೆಗೆ ನಡೆದು, ಮದ್ದೂರಿನಿಂದ ಬರುತ್ತಿದ್ದ ಶಟಲ್ ಟ್ರೈನಿನ ಶಾಲಾ ಮಕ್ಕಳ ಸ್ಪೆಷಲ್ ಬೋಗಿ ಹತ್ತಬೇಕಾದರೆ ರೈಲು ನಿಲ್ದಾಣದಲ್ಲಿ ಕಿಕ್ಕಿರಿದು ಕೂತಿದ್ದ ನಿರಾಶ್ರಿತ ಹಿಂದೂಗಳ ರೋದನ ಅವರ ಹೃದಯ ಹಿಂಡುತ್ತಿತ್ತು. ತಾನು ಮುಸಲ್ಮಾನ ಅಂದುಕೊಳ್ಳಲು ಅವರಿಗೆ ಗಾಬರಿಯಾಗುತ್ತಿತ್ತು.

ಉತ್ತರ ಭಾರತದಿಂದ ಬಂದಿದ್ದ ಆ ನಿರಾಶ್ರಿತರು ಹೃದಯ ವಿದ್ರಾವಕ ಕಥೆಗಳನ್ನು ಹೇಳುತ್ತಿದ್ದರು. ಆ ಕಥೆ ಕೇಳಿ ಅಳ್ಳೆದೆಗೊಂಡ ಕರೀಮುದ್ದೀನ್ ಎಂಬ ಆ ಹುಡುಗ ಮನೆಯ ಯಜಮಾನನೂ ಆಗಿದ್ದರಿಂದ ಎಲ್ಲಿಗಾದರೂ ದೂರ ಕುಟುಂಬ ಸಮೇತ ಪರಾರಿಯಾಗಬೇಕೆಂದುಕೊಂಡಿದ್ದ. ಆದರೆ ಶ್ರೀರಂಗಪಟ್ಟಣದ ಹಿರಿಯರು ಆ ಹುಡುಗನಿಗೆ ಬುದ್ಧಿ ಹೇಳಿ ರಕ್ಷಣೆ ಕೊಟ್ಟು ಕಾಪಾಡಿದರು. ಏಕೆಂದರೆ ಆಗ ಶ್ರೀರಂಗಪಟ್ಟಣದಿಂದ ಹೈದರಾಬಾದಿನ ನವಾಬರ ರಾಜ್ಯಕ್ಕೆ ವಲಸೆ ಹೋದವರು ಅಲ್ಲಿನ ರಜಾಕಾರರಿಂದ ಒದೆತ ತಿಂದು ವಾಪಸ್ಸು ಬಂದಿದ್ದರು. ಅದೂ ಅಲ್ಲದೆ ಕರೀಮುದ್ದೀನ್ ಟಿಪ್ಪೂವಿನ ಕುಟುಂಬಕ್ಕೆ ಸೇರಿದ್ದರಿಂದ ಟಿಪ್ಪೂವಿನ ಮೇಲಿದ್ದ ಅವರ ಪ್ರೀತಿ ರಕ್ತಗತವಾಗಿ ಆ ಹುಡಗನ ಕಡೆಗೂ ಹರಿದಿತ್ತು.

'ಅದೆಲ್ಲಾ ಸರಿ, ನೀವು ಕನ್ನಡ ಕಲಿತು ಕನ್ನಡದ ಪ್ರೊಫೆಸರ್ ಹೇಗೆ ಆದಿರಿ ಹೇಳಲೇ ಇಲ್ಲ' ಎಂದು ನಡುವಿನಲ್ಲಿ ನಾನು ಕೇಳಿದೆ. ಅದೆಲ್ಲಾ ಕುವೆಂಪು ಮತ್ತು ಮಿಲ್ಟನ್ನನ ಪ್ಯಾರಡೈಸ್ ಲಾಸ್ಟ್ ಮಹಾಕಾವ್ಯದ ದೆಸೆಯಿಂದ ಎಂದು ಆ ಕಥೆಯನ್ನೂ ಅವರು ಹೇಳಿದರು.

ಕರೀಮುದ್ದೀನ್ ಅವರು ಒಂದನೇ ತರಗತಿಗೆ ಉರ್ದು ಶಾಲೆಗೆ ಸೇರಿದ್ದರಂತೆ. ಅಲ್ಲಿ ಒಂದರಿಂದ ನಾಲ್ಕರವರೆಗೆ ಎಲ್ಲಾ ಕ್ಲಾಸಿನ ಮಕ್ಕಳೂ ಒಂದೇ ಕೋಣೆಯಲ್ಲಿ ಕೂತಿರಬೇಕಿತ್ತಂತೆ. ಒಂದು ದಿನ ನಾಲ್ಕನೇ ತರಗತಿಯವರಿಗೆ ಕೇಳಿದ ಪ್ರಶ್ನೆಗೆ ಒಂದನೇ ತರಗತಿಯ ಕರೀಮುದ್ದೀನ್ ಉತ್ತರ ಹೇಳಿದ್ದಕ್ಕೆ ಕೆಂಡಾಮಂಡಲವಾದ ಉರ್ದು ಶಾಲೆಯ ಮೌಲ್ವಿ ಕಂಡಾಬಟ್ಟೆ ಬಾರಿಸಿದನಂತೆ. ಆಗ ಕರೀಮುದ್ದೀನರ ಮನೆಯಲ್ಲಿ ಬಟ್ಟೆ ಒಗೆಯಲು ಬರುತ್ತಿದ್ದ ಅಗಸರ ಎಂಕಟಮ್ಮನ ಮಗ ಜವರಯ್ಯ ಪಕ್ಕದ ಕನ್ನಡ ಶಾಲೆಯಲ್ಲಿ ಮೇಷ್ಟ್ರಾಗಿದ್ದರಂತೆ. ಅವರು ಅಳುತ್ತಿದ್ದ ಬಾಲಕನನ್ನು ಎತ್ತಿಕೊಂಡು ಹೋಗಿ ಕನ್ನಡ ಶಾಲೆಗೆ ಸೇರಿಸಿದರಂತೆ.

ಆದರೂ ಕನ್ನಡ ಕಲಿಯಬೇಕೆಂದು ಕರೀಮುದ್ದೀನರಿಗೆ ಆಸೆಯೇನೂ ಇರಲಿಲ್ಲ. ಅವರು ಇಂಗ್ಲಿಷ್ ಕಲಿಯಬೇಕೆಂದು ಮಹಾರಾಜಾ ಕಾಲೇಜಿಗೆ ಸೇರಿದರೆ ಅಲ್ಲಿ ಕ್ಯಾಪ್ಟನ್ ರಾಮಸ್ವಾಮಿಯವರು ಮಿಲ್ಟನ್ನನ ಪ್ಯಾರಡೈಸ್ ಲಾಸ್ಟ್ ಕಾವ್ಯವನ್ನು ಸಾಯಂಕಾಲ ಕೊನೇ ಪೀರಿಯಡ್ನಲ್ಲಿ ಕಲಿಸುತ್ತಿದ್ದರಂತೆ. ಆದರೆ ಆ ಕಾವ್ಯದಲ್ಲಿ ಪ್ರತಿಮೆಗಳೂ ಉಪಮೆಗಳೂ ಗ್ರೀಕ್ ಹಾಗೂ ಲ್ಯಾಟಿನ್ ಪದಗಳೂ ಎಲ್ಲಾ ಸೇರಿ ಕೊನೆಯ ಪೀರಿಯಡ್ನಲ್ಲಿ ವಿದ್ಯಾರ್ಥಿಗಳ ತಲೆಗೆ ಅದು ಹತ್ತದೆ, ಕ್ಯಾಪ್ಟನ್ ರಾಮಸ್ವಾಮಿಯವರು ಬೆಳಗ್ಗೆ ಒಂಬತ್ತೂವರೆಗೇ 'ಪ್ಯಾರಡೈಸ್ ಲಾಸ್ಟ್' ಶುರು ಮಾಡುತ್ತಿದ್ದರಂತೆ. ಆದರೆ ಕರೀಮುದ್ದೀನರ ಮದ್ದೂರು ಶಟಲ್ ಮೈಸೂರು ತಲುಪುತ್ತಿದ್ದುದು ಹತ್ತೂವರೆಗೆ.

ಕರೀಮುದ್ದೀನರಿಗೆ ರೋಸಿ ಹೋಗಿ ದೂರು ಹೇಳಲು ಹೋದರೆ ಪ್ರಿನ್ಸಿಪಾಲರಾಗಿದ್ದವರು ಕನ್ನಡದ ರಸಋಷಿ ಕುವೆಂಪು. ಅವರು ಇವರ ಮಾತುಗಳನ್ನು ಕೇಳಿ 'ಮಹಮದೀಯನಾದರೂ ಈತ ಎಷ್ಟು ಚೆನ್ನಾಗಿ ಕನ್ನಡ ಮಾತನಾಡುತ್ತಾನೆ' ಎಂದು ಅಚ್ಚರಿಗೊಂಡು ಅವರನ್ನು ಕನ್ನಡ ಆನರ್ಸ್‌ಗೆ ಸೇರಿಸಿದರಂತೆ. ಪಾಠ ಮಾಡುತ್ತಾ ಮಾಡುತ್ತಾ ಕುವೆಂಪುರವರು ಇದ್ದಕ್ಕಿದಂತೆ ನಿಮಿಷಗಟ್ಟಲೆ ಸೈಲಂಟ್ ಆಗಿಬಿಡುತ್ತಿದ್ದುದನ್ನು ಕರೀಮುದ್ದೀನ್ ಈಗಲೂ ನೆನಪಿಸಿಕೊಂಡು ನಗುತ್ತಾರೆ.

ಮಾತಿನ ನಡುವಲ್ಲಿ ಕರೀಮುದ್ದೀನರು ಹೆರಾಕ್ಲಿಟಸ್ ಎಂಬ ತತ್ತ್ವಜ್ಞಾನಿಯ ಮಾತುಗಳನ್ನು ಹೇಳಿದರು. ಏಸುಕ್ರಿಸ್ತನೂ ಸಣ್ಣವನಿರುವಾಗ ಹೆರಾಕ್ಲಿಟಸ್‌ನ ತತ್ತ್ವಗಳನ್ನು ಶಾಲೆಯಲ್ಲಿ ಓದಿದ್ದನಂತೆ. ಹೆರಾಕ್ಲಿಟಸ್‌ನ ಪ್ರಕಾರ ಬೆಳಕಿಗಿಂತ ಮೊದಲೂ ಬೆಳಕು ಹೋದ ಮೇಲೂ ಕತ್ತಲೆ ಇರುತ್ತದೆ. ಅದೇ ಸರ್ವವ್ಯಾಪಿ. ಹಾಗಾಗಿ ನಾನು ಬೆಳಕು ಎಂದು ದೇವರು ಹೇಳುವುದಿಲ್ಲ ಎಂದು ಅವರು ಹೇಳುತ್ತಾರೆ.

ನಾನು ಬೆಳಕಿಲ್ಲದ ಆ ಆಕಾಶದಲ್ಲಿ ಬಿದಿಗೆಯ ಚಂದ್ರ ಮತ್ತು ಅದರ ಪಕ್ಕದಲ್ಲಿರುವ ಸಣ್ಣ ನಕ್ಷತ್ರವನ್ನು ನೋಡುತ್ತಾ ನೂರಾರು ಜನರು ತೀರಿಹೋಗಿರುವ ಶ್ರೀರಂಗಪಟ್ಟಣದ ಯುದ್ಧಭೂಮಿಯಲ್ಲಿ ಗೋರಿಯ ಕಲ್ಲುಗಳ ನಡುವಲ್ಲಿ ಹೆದರುತ್ತಾ ಬೈಕು ಓಡಿಸುತ್ತಾ ಬಂದು ಈಗಲೂ ಸುಮ್ಮಗೆ ಕೂತಿದ್ದೇನೆ.

**ಲೇಖಕರ ಪರಿಚಯ:**



ಕವಿ, ಕಥೆಗಾರ, ಅಂಕಣಕಾರ ಹಾಗೂ ಕಾದಂಬರಿಕಾರರೂ ಆದ ಅಬ್ದುಲ್ ರಶೀದ್‌ರವರು ೧೯೬೫ರಲ್ಲಿ ಕೊಡಗಿನ ಸುಂಟಿಕೊಪ್ಪದಲ್ಲಿ ಜನಿಸಿದರು. ಇವರ ತಂದೆ ಇಸ್ಮಾಯಿಲ್ ಮತ್ತು ತಾಯಿ ಫಾತಿಮಾ.

ಇವರು 'ಹಾಲು ಕುಡಿದ ಹುಡುಗ', 'ಪ್ರಾಣಪಕ್ಷಿ', 'ಈ ತನಕದ ಕಥೆಗಳು' ಕಥಾ ಸಂಕಲನಗಳನ್ನೂ 'ನನ್ನ ಪಾಡಿಗೆ ನಾನು' ಕವನ ಸಂಕಲನವನ್ನೂ, 'ಮಾತಿಗೂ ಆಚೆ', 'ಅಲೆಮಾರಿಯ ದಿನಚರಿ', 'ಮೈಸೂರ್ ಪೋಸ್ಟ್' ಅಂಕಣ ಬರೆಹಗಳನ್ನೂ 'ಹೂವಿನಕೊಲ್ಲಿ' ಕಾದಂಬರಿಯನ್ನೂ ರಚಿಸಿದ್ದಾರೆ. ಇವರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಸುವರ್ಣ ಮಹೋತ್ಸವದ ಯುವ ಲೇಖಕ ಪ್ರಶಸ್ತಿ, ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ವರ್ಧಮಾನ ಪ್ರಶಸ್ತಿ, ಲಂಕೇಶ್ ಪ್ರಶಸ್ತಿ ದೊರೆತಿವೆ.

ಅಬ್ದುಲ್ ರಶೀದ್‌ರವರು ಮಂಗಳೂರು, ಮೇಘಾಲಯದ ಶಿಲ್ಲಾಂಗ್, ಗುಲ್ಬರ್ಗಾ, ಮೈಸೂರು ಆಕಾಶವಾಣಿ ಕೇಂದ್ರದಲ್ಲಿ ಕಾರ್ಯ ನಿರ್ವಹಿಸಿದ್ದಾರೆ. ಈಗ ಮಡಿಕೇರಿ ಆಕಾಶವಾಣಿ ಕೇಂದ್ರದಲ್ಲಿ ಕಾರ್ಯಕ್ರಮ ನಿರ್ವಾಹಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಕನ್ನಡದ ಜನಪ್ರಿಯ ಅಂತರ್ಜಾಲ ತಾಣ 'ಕೆಂಡಸಂಪಿಗೆ'ಯ ಗೌರವ ಸಂಪಾದಕರಾಗಿದ್ದಾರೆ.

ಪ್ರಸ್ತುತ ಪಠ್ಯ ಭಾಗವನ್ನು ಇವರ 'ಮೈಸೂರ್ ಪೋಸ್ಟ್' ಕೃತಿಯಿಂದ ಆರಿಸಿದೆ.

**ಓದಿ ತಿಳಿಯಿರಿ:**

ದೆಸೆ – ದಿಕ್ಕು

ರಾಜಬತ್ತೆ – ರಾಜರ ಸಂಬಂಧಿಗಳಿಗೆ ನೀಡುತ್ತಿದ್ದ ಹಣ

ಪರಿಚಾರಕ – ಸೇವಕ

ಮತಿಭ್ರಮಣೆ – ಹುಚ್ಚು, ಚಿತ್ತ ಚಾಂಚಲ್ಯ

ಭಾವಮೈದುನ – ಹೆಂಡತಿಯ ತಮ್ಮ

ದಯನೀಯ – ಚಿಂತಾಜನಕ, ಶೋಚನೀಯ

ಶತಪಥಹಾಕು – ಸುತ್ತಾಡು, ಅಲೆದಾಡು

ಕೆಂಡಾಮಂಡಲ – ಅತಿ ಕೋಪ

ರೋಸಿ ಹೋಗು – ಕೋಪಗೊಳ್ಳು

ತತ್ತ್ವಜ್ಞಾನಿ – ದಾರ್ಶನಿಕ

ಸರ್ವವ್ಯಾಪಿ – ಎಲ್ಲೆಲ್ಲೂ ಇರುವ

**ವಿಶೇಷಾಂಶ:**

ಪ್ಯಾರಡೈಸ್ ಲಾಸ್ಟ್ – ಮಿಲ್ಟನ್ ಕವಿಯ ಮಹಾಕಾವ್ಯ

ಮಾವಿದ್ ವಿಷಾವ ಹೈ – ನಾವಿಬ್ಬರೂ ಪರಸ್ಪರ ದ್ವೇಷಿಸದೆ ಇರೋಣ (ಇದು ಉಪನಿಷತ್ ವಾಕ್ಯವಾಗಿದೆ)

ದ್ವೀಪ – ಸುತ್ತಲೂ ನೀರಿನಿಂದ ಆವರಿಸಿರುವ ಭೂಪ್ರದೇಶ.

**ಪಾಠಕ್ಕೆ ಮುನ್ನ ಓದಿ ತಿಳಿಯಿರಿ:**

**ಪ್ರೊ॥ ಕರೀಮುದ್ದೀನ್ ಸಾಹೇಬರ ಹಿನ್ನೆಲೆ:**

ಪ್ರೊಫೆಸರ್ ಕರೀಮುದ್ದೀನ್ ಸಾಹೇಬರು ೧೯೩೭ರಲ್ಲಿ ಶ್ರೀರಂಗಪಟ್ಟಣದ ಗಂಜಾಂನಲ್ಲಿ ಜನಿಸಿದರು. ಇವರ ತಂದೆ ಅಬ್ದುಲ್ ಅಲಿ ಮತ್ತು ಇವರ ತಾಯಿ ರಹೀಮ್ ಉನ್ನೀಸಾ (ಇವರು ವೆಲ್ಲೂರು–ತಮಿಳುನಾಡು ಮೂಲದವರು). ಇವರ ಪ್ರಾಥಮಿಕ ಶಿಕ್ಷಣ ಗಂಜಾಂ ಮತ್ತು ಶ್ರೀರಂಗಪಟ್ಟಣದಲ್ಲಿ ನಡೆಯಿತು. ಮೈಸೂರಿನ ಮಹಾರಾಜಾ ಪ್ರೌಢಶಾಲೆಯಲ್ಲಿ ನಂತರದ ಶಿಕ್ಷಣ ಮುಂದುವರಿಸಿದರು. ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಕನ್ನಡ ಆನರ್ಸ್ ಹಾಗೂ ಕನ್ನಡ ಎಂ.ಎ., ಪದವಿಗಳನ್ನು ಪಡೆದರು. ಇವರು ಅರೇಬಿಕ್, ಪರ್ಷಿಯನ್, ಉರ್ದು, ಇಂಗ್ಲಿಷ್, ಕನ್ನಡ, ಹಿಂದಿ ಹೀಗೆ ಆರು ಭಾಷೆಗಳಲ್ಲಿ ಪ್ರಾವೀಣ್ಯ ಪಡೆದಿದ್ದಾರೆ.

ಇವರ ತಾತಂದಿರು ಟಿಪ್ಪು ಆಳ್ವಿಕೆಯಲ್ಲಿ ವಿದ್ವಾಂಸರಾಗಿದ್ದು, ಟಿಪ್ಪೂವಿನ ಭಾವಮೈದುನರಾಗಿದ್ದರು. ಕ್ಯಾಲಿಗ್ರಫಿ ಬರೆವಣಿಗೆಯಲ್ಲಿ ಪ್ರಸಿದ್ಧರಾಗಿದ್ದರು. ಪರ್ಷಿಯನ್ ಹಾಗೂ ಅರೇಬಿಕ್ ಭಾಷೆ ಬಳಸಿ ಕ್ಯಾಲಿಗ್ರಫಿಯಲ್ಲಿ ಕುರಾನ್ ಬರೆದಿದ್ದಾರೆ. ಈಗಲೂ ಈ ಕ್ಯಾಲಿಗ್ರಫಿ ಪ್ರತಿ ಕರೀಮುದ್ದೀನ್‌ರವರ ಬಳಿ ಇದೆ.

ಕರೀಮುದ್ದೀನ್ ಸಾಹೇಬರು ಮೈಸೂರಿನ ತಾಲ್ಲೂಕು ಬೋರ್ಡ್ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿದ್ದರು. ನಂತರ ಮಂಡ್ಯದ ಸರ್ಕಾರಿ ಬಾಲಕರ ಕಾಲೇಜು ಹಾಗೂ ಮಂಡ್ಯದ ಸರ್ಕಾರಿ ಬಾಲಕಿಯರ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ.

ಇವರು ವಿಶ್ರಾಂತ ಜೀವನದಲ್ಲೂ ಮನೆಯಲ್ಲಿ ಸುಮ್ಮನೆ ಕೂರದೆ ಹಲವಾರು ವಿದ್ಯಾಸಂಸ್ಥೆಗಳಲ್ಲಿ ಪ್ರಿನ್ಸಿಪಾಲರಾಗಿ, ಆಡಳಿತಗಾರರಾಗಿ ಸೇವೆ ಸಲ್ಲಿಸಿದ್ದಾರೆ. ಈಗಲೂ ಶ್ರೀರಂಗಪಟ್ಟಣದ ಇತಿಹಾಸದ ಬಗ್ಗೆ ಬೆಳಕು ಚೆಲ್ಲುವ ಕೆಲಸವನ್ನು ಮಾಡುತ್ತಿದ್ದಾರೆ. ಗಾಂಧಿವಾದಿಗಳಾದ ಇವರು ನಿರಂತರವಾಗಿ ಉಪನ್ಯಾಸ, ಭಾಷಣಗಳನ್ನು ನೀಡುತ್ತಾ ಬಂದಿದ್ದಾರೆ. ಸರಳ ಜೀವನ, ಸೌಹಾರ್ದತೆಯ ಉತ್ತಮ ಜೀವನ ಮೌಲ್ಯಗಳನ್ನು ಅಳವಡಿಸಿಕೊಂಡು, ಅದರಂತೆ ಬಾಳುತ್ತಾ ಇಂದಿಗೂ ಜನಮಾನಸದಲ್ಲಿ ಅಚ್ಚಳಿಯದೆ ಉಳಿದಿದ್ದಾರೆ.

## ಅಭ್ಯಾಸ

**ಅ. ಬಿಟ್ಟ ಸ್ಥಳವನ್ನು ಸೂಕ್ತ ಪದಗಳಿಂದ ತುಂಬಿರಿ.**

೧. ಟಿಪ್ಪು ಕಾಲದಲ್ಲಿ ದಿವಾನರಾಗಿದ್ದವರು ________
(ಶೇಷಗಿರಿ ಅಯ್ಯರ್, ಪೂರ್ಣಯ್ಯ, ಮಿರ್ಜಾ ಇಸ್ಮಾಯಿಲ್, ಹನುಮಂತಯ್ಯ)

೨. ಕರೀಮುದ್ದೀನ್ ಸಾಹೇಬರು ________ ವಿದ್ವಾಂಸರ ಕುಟುಂಬಕ್ಕೆ ಸೇರಿದವರು.
(ಅರೇಬಿಕ್, ಪೋರ್ಚುಗೀಸ್, ತಮಿಳು, ತೆಲುಗು)

೩. ಕರೀಮುದ್ದೀನ್‌ರ ಉತ್ತರ ಕೇಳಿ ಕೆಂಡಾಮಂಡಲವಾದ ಉರ್ದು ಶಾಲೆಯ ಮೌಲ್ವಿ ________ ಬಾರಿಸಿದರಂತೆ.
(ಮೆಲ್ಲಗೆ, ಬೆನ್ನಿನ ಮೇಲೆ, ಕಂಡಾಬಟ್ಟೆ, ನಿಂದಿಸುತ್ತಾ)

೪. ಮಹಾರಾಜ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿದ್ದವರು ________
(ತೀ.ನಂ.ಶ್ರೀ, ಕುವೆಂಪು, ದ.ರಾ.ಬೇಂದ್ರೆ, ಕ್ಯಾಪ್ಟನ್ ರಾಮಸ್ವಾಮಿ)

**ಆ. ಸಮಾನಾರ್ಥಕ ಪದಗಳನ್ನು ಬರೆಯಿರಿ:**

೧. ರೋದನ ೨. ಬೀಳುಕೊಡು ೩. ಪತನ ೪. ಸಂಭಾಳಿಸು

**ಇ. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ:**

೧. ಕರೀಮುದ್ದೀನ್‌ರವರ ಊರು ಯಾವುದು?

೨. ಕರೀಮುದ್ದೀನ್‌ರವರ ತಂದೆ, ತಾಯಿಯರ ಹೆಸರೇನು?

೩. ಟಿಪ್ಪೂಸುಲ್ತಾನರ ಭಾವಮೈದುನರ ಹೆಸರೇನು?

೪. ಟಿಪ್ಪೂಸುಲ್ತಾನ್, ಹೈದರಾಲಿಯವರ ಸಮಾಧಿ ಇರುವ ಸ್ಥಳ ಯಾವುದು?

೫. 'ಫ್ರೆಂಚ್‌ರಾಕ್ಸ್' ಎಂದು ಕರೆಯಲ್ಪಡುತ್ತಿದ್ದ ಊರು ಯಾವುದು?

೬. ಶ್ರೀರಂಗಪಟ್ಟಣ – ಗಂಜಾಂ ಸ್ಥಳದ ವಿಸ್ತೀರ್ಣ ಎಷ್ಟು?

೭. ಕರೀಮುದ್ದೀನ್‌ರವರ ಪ್ರಾಥಮಿಕ ಶಿಕ್ಷಣ ಎಲ್ಲಿ ನಡೆಯಿತು?

೮. ಕರೀಮುದ್ದೀನ್‌ರವರು ಕನ್ನಡ ಆನರ್ಸ್ ವ್ಯಾಸಂಗ ಮಾಡಿದ ಕಾಲೇಜು ಯಾವುದು?

**ಈ. ಈ ಕೆಳಗಿನ ಪ್ರಶ್ನೆಗಳಿಗೆ ಎರಡು / ಮೂರು ವಾಕ್ಯಗಳಲ್ಲಿ ಉತ್ತರ ಬರೆಯಿರಿ:**

೧. ಕರೀಮುದ್ದೀನ್ ಸಾಹೇಬರ ಮುತ್ತಾತಂದಿರ ಕುಟುಂಬ ವೆಲ್ಲೂರಿಗೆ ಹೋಗಿ ನೆಲೆಸಲು ಕಾರಣವೇನು?

೨. ಕರೀಮುದ್ದೀನ್ ಸಾಹೇಬರು ಕನ್ನಡ ಪ್ರೊಫೆಸರ್ ಆಗಿದ್ದು ಹೇಗೆ?

೩. ಕರೀಮುದ್ದೀನ್ ಸಾಹೇಬರ ಮೇಲೆ ಪ್ರಭಾವ ಬೀರಿದ ಮಹನೀಯರು ಯಾರು?

**ಉ. ಈ ಕೆಳಗಿನ ಪ್ರಶ್ನೆಗಳಿಗೆ ಐದು / ಆರು ವಾಕ್ಯಗಳಲ್ಲಿ ಉತ್ತರಿಸಿರಿ:**

೧. ಕರೀಮುದ್ದೀನ್‌ರವರ ಪ್ರಕಾರ ಹಿಂದೂಸ್ತಾನದ ರಾಜಮಹಾರಾಜರುಗಳು ಬ್ರಿಟಿಷರ ಕೈಯಲ್ಲಿ ಸುಲಭವಾಗಿ ಸೋಲಲು ಕಾರಣವೇನು?

೨. ಕರೀಮುದ್ದೀನ್ ಸಾಹೇಬರ ತಂದೆ ಯಾರಿಗೆ, ಏತಕ್ಕಾಗಿ ಪತ್ರ ಬರೆದರು?

೩. ಕರೀಮುದ್ದೀನ್ ಸಾಹೇಬರು ಅವಿವಾಹಿತರಾಗಿ ಉಳಿಯಲು ಕಾರಣವೇನು?

೪. ಹೆರಾಕ್ಲಿಟಸ್ ದೇವರ ಬಗ್ಗೆ ಏನೆಂದು ಪ್ರತಿಪಾದಿಸಿದ್ದಾನೆ?

೫. ಕರೀಮುದ್ದೀನ್ ಸಾಹೇಬರು ಗಂಜಾಂನಲ್ಲಿಯೇ ಉಳಿಯಲು ಕಾರಣವೇನು?

**ಊ. ಸಂದರ್ಭದೊಡನೆ ವಿವರಿಸಿರಿ:**

೧. 'ಬ್ರಿಟಿಷ್ರಿಗೆ ಇನ್ನೇನು ಬೇಕು? ಎಲ್ಲವನ್ನು ವೇಗವಾಗಿ ನುಂಗಿ ನೀರು ಕುಡಿದರು.'

೨. 'ಅದೆಲ್ಲ ಸರಿ ನೀವು ಕನ್ನಡ ಕಲಿತು ಕನ್ನಡದ ಪ್ರೊಫೆಸರ್ ಹೇಗೆ ಆದಿರಿ ಹೇಳಲೇ ಇಲ್ಲ.'



## ಭಾಷಾಭ್ಯಾಸ

**ಅ. ಸ್ವಂತ ವಾಕ್ಯದಲ್ಲಿ ಬರೆಯಿರಿ:**

೧. ವಲಸೆಹೋಗು ೨. ಕೆಂಡಾಮಂಡಲವಾಗು ೩. ತಿರಸ್ಕರಿಸು ೪. ಸರ್ವವ್ಯಾಪಿ

**ಆ. ವಿರುದ್ಧಾರ್ಥಕ ಪದಗಳನ್ನು ಬರೆಯಿರಿ**

೧. ಸುಲಭ ೨. ವೇಗ ೩. ಕತ್ತಲು ೪. ದಯೆ ೫. ನೆನಪು

## ಚಟುವಟಿಕೆ

೧. ಐತಿಹಾಸಿಕ ಸ್ಥಳ ಶ್ರೀರಂಗಪಟ್ಟಣಕ್ಕೆ ಭೇಟಿ ನೀಡಿ ಹೆಚ್ಚಿನ ಮಾಹಿತಿ ಸಂಗ್ರಹಿಸಿರಿ.

೨. ನಿಮ್ಮ ಸ್ಥಳೀಯ ಸಾಧಕರ ಬಗ್ಗೆ ಮಾಹಿತಿ ಸಂಗ್ರಹಿಸಿರಿ.

೩. ಪತ್ರಿಕೆಗಳಲ್ಲಿ ಬರುವ ಅಂಕಣ ಬರೆಹಗಳನ್ನು ಓದಿರಿ ಹಾಗೂ ಸಂಗ್ರಹಿಸಿರಿ.

# ವಿಭಕ್ತಿ ಪ್ರತ್ಯಯ

ನಾಮ ಪ್ರಕೃತಿಗಳ ಮುಂದೆ ಸೇರಿಕೊಂಡು ಬೇರೆ, ಬೇರೆ ಅರ್ಥವನ್ನು ಉಂಟು ಮಾಡುವ ಪ್ರತ್ಯಯಗಳಿಗೆ 'ವಿಭಕ್ತಿ ಪ್ರತ್ಯಯ' ಎಂದು ಹೆಸರು. ವಿಭಕ್ತಿಗಳಲ್ಲಿ ಏಳು ವಿಧಗಳಿವೆ.

ವಾಕ್ಯದಲ್ಲಿ ಪದಗಳಿಗೆ ಸೇರಿರುವ ವಿಭಕ್ತಿ ಪ್ರತ್ಯಯಗಳು ಉಂಟು ಮಾಡುವ ಅರ್ಥವೇ 'ಕಾರಕಾರ್ಥ'. ಒಂದೊಂದು ವಿಭಕ್ತಿ ಪ್ರತ್ಯಯವು ಒಂದೊಂದು ಕಾರಕಾರ್ಥವನ್ನು ಉಂಟು ಮಾಡುತ್ತದೆ. ಆರು ವಿಧದ ಕಾರಕಗಳಿವೆ. ಷಷ್ಠೀ ವಿಭಕ್ತಿಯಲ್ಲಿ ಕಾರಕವು ಸಂಬಂಧಾರ್ಥದಲ್ಲಿ ಬಳಕೆಯಾದರೂ ಅದು ಕಾರಕವಲ್ಲ ಎಂದು ಭಾವಿಸಬೇಕು.

ವಿಭಕ್ತಿ ಪ್ರತ್ಯಯ ಮತ್ತು ಅದು ಪ್ರಕಟಿಸುವ ಕಾರಕಾರ್ಥಗಳ ಪಟ್ಟಿಯನ್ನು ಈ ಕೆಳಗೆ ನೀಡಿದೆ.

| | ವಿಭಕ್ತಿಗಳು | ಕಾರಕಾರ್ಥಗಳು | ವಿಭಕ್ತಿ ಪ್ರತ್ಯಯ | ಉದಾಹರಣೆ |
|---|---|---|---|---|
| ೧. | ಪ್ರಥಮಾ | ಕರ್ತೃ (ಕೆಲಸವನ್ನು ಮಾಡುವ ವ್ಯಕ್ತಿ) | ಉ | ಮರವು |
| ೨. | ದ್ವಿತೀಯಾ | ಕರ್ಮ (ಕ್ರಿಯೆಗೆ ಒಳಗಾಗುವ ವ್ಯಕ್ತಿ ಅಥವಾ ವಸ್ತು) | ಅನ್ನು | ಮರವನ್ನು |
| ೩. | ತೃತೀಯಾ | ಕರಣ (ಸಾಧನ) | ಇಂದ | ಮರದಿಂದ |
| ೪. | ಚತುರ್ಥೀ | ಸಂಪ್ರದಾನ (ಕೊಡುವಿಕೆ) | ಗೆ–ಇಗೆ–ಕ್ಕೆ | ಮರಕ್ಕೆ |
| ೫. | ಪಂಚಮೀ | ಅಪಾದಾನ (ಅಗಲಿಕೆ) | ದೆಸೆಯಿಂದ | ಮರದ ದೆಸೆಯಿಂದ |
| ೬. | ಷಷ್ಠೀ | ಸಂಬಂಧ (ಕಾರಕ ಇಲ್ಲ) | ಅ | ಮರದ |
| ೭. | ಸಪ್ತಮೀ | ಅಧಿಕರಣ (ಆಧಾರ) | ಅಲ್ಲಿ | ಮರದಲ್ಲಿ |

# ೭. ತೊಟ್ಟಿಲು ತೂಗುವ ಹಾಡು

– ವೈದೇಹಿ

**ಪ್ರವೇಶ ಮತ್ತು ಆಶಯ :**

ಆಧುನಿಕತೆಯ ಪ್ರಭಾವದಿಂದ ಹಳ್ಳಿಗರು ಪಟ್ಟಣಕ್ಕೆ ವಲಸೆ ಬರುತ್ತಿದ್ದಾರೆ. ಹಳ್ಳಿಗರು ಅಲ್ಲಿಯ ಪ್ರಕೃತಿಯ ಕೂಸುಗಳಾಗಿದ್ದಾರೆ. ನಗರಗಳಲ್ಲಿ ಆತ್ಮೀಯತೆ ಮರೆಯಾಗುತ್ತಿದೆ. ಜಾನಪದ ಸಂಸ್ಕೃತಿ ಕಣ್ಮರೆಯಾಗುತ್ತಿದೆ. ಅವಿಭಕ್ತ ಕುಟುಂಬ ಒಡೆದು, ಹಿರಿಯರ ಅನುಭವ ಮಾಗದರ್ಶನಗಳ ಕೊರತೆ ಇವುಗಳಿಂದ ವಿಭಕ್ತ ಕುಟುಂಬಗಳಾಗುತ್ತಿವೆ. ಪ್ರಸ್ತುತ ಕವನದಲ್ಲಿ ಕುಟುಂಬದಲ್ಲಿ ಇರುವ ಆತ್ಮೀಯತೆಯನ್ನು ಕಾಣಬಹುದು.

ಪ್ರಸ್ತುತ ಭಾಗದಲ್ಲಿ ಪ್ರಕೃತಿಯನ್ನು ವರ್ಣಿಸುತ್ತಾ ತಾಯಿಯೊಬ್ಬಳು ತನ್ನ ಮಗುವನ್ನು ಮಲಗಿಸಲು ಹಾಡುವ ಜೋಗುಳದ ಹಾಡು ಸೊಗಸಾಗಿ ಮೂಡಿಬಂದಿದೆ.



ಮುಗಿಲು ಚಂದ ಮಳೆಯು ಚಂದ
ತೋಯ್ದ ಗುಡ್ಡ ಬೆಟ್ಟ ಚಂದ
ಮಿಟ್ಟೆ ಹೂ ಪಕಳೆ ಚಂದ
ಮೊಟ್ಟೆ ಚಂದ ಹಕ್ಕಿ ಚಂದ
ಎಲ್ಲಕ್ಕಿಂತ ನಮ್ಮ ಮನೆಯ
ತೊಟ್ಟಿಲಿನ ತೊದಲು ಚಂದ
ತೊದಲು ತೂಗಿರೋ ಹಾಡಿ
ಹಾಡು ತೂಗಿರೋ

ಹರಿವ ಹೊಳೆಯ ಳು ಳು ಳು ಚಂದ
ಅಲೆಯ ನೊರೆಯ ರು ರು ರು ಚಂದ
ಗಾಳಿ ಸ್ಸುಂಯ್ಞ್ ಹಾಯಿ ಚಂದ
ಸಾವಧಾನ ತೇಲಿ ಬರುವ
ದೋಣಿವೋ –– ಗೀತೆ ಚಂದ
ಎಲ್ಲಕಿಂತ ಜೋಲಿಯೊಳಗೆ
ಲ ಲ ಲ ನಗುವ ಹಸುಳೆ ಚಂದ
ಬೀಸಿ ತೂಗಿರೋ ಜೋಲಿ
ಲಾಲಿ ತೂಗಿರೋ



ಗಿರಿಯು ಚಂದ ಗರಿಯು ಚಂದ
ಗಿರಿಯಲಾಡೋ ನವಿಲು ಚಂದ
ಗಿರಿಗಿರಿ ಗಿರಿಗಿಟಿಯು ಚಂದ
ಗರ್‍ರ ಗರ್‍ರ ಬುಗುರಿ ಬಳಿ
ಪಿಳಿಪಿಳಿ ಗಿಳಿ ಗೊಂಬೆ ಚಂದ

ಎಲ್ಲಕ್ಕಿಂತ ಕರಿಕಂಗಳ ಮಿರಿ ಮಿನುಗುವ ತಾರೆ ಚಂದ
ಎಲ್ಲಕ್ಕಿಂತ ಗುಬ್ಬಿ ಗುಬ್ಬೀ ತಾರಮ್ಮಯ್ಯ ಚಂದ ಚಂದ
ಇನ್ನೂ ತೂಗಿರೋ ಹ್ಹೋಯ್
ಮಗುವ ತೂಗಿರೋ ಆಹ
ಜಗವ ತೂಗಿರೋ



**ಕವಿ ಕಾವ್ಯ ಪರಿಚಯ :**



ವೈದೇಹಿ ಅವರು ಉಡುಪಿ ಜಿಲ್ಲೆಯ ಕುಂದಾಪುರದಲ್ಲಿ ೧೨ನೇ ಫೆಬ್ರವರಿ ೧೯೪೫ರಂದು ಜನಿಸಿದರು. ಇವರ ನಿಜನಾಮ ಜಾನಕಿ ಶ್ರೀನಿವಾಸಮೂರ್ತಿ. ಕುಂದಾಪುರದ ಭಂಡಾರಕರ್ಸ್ ಕಾಲೇಜಿನಲ್ಲಿ ಬಿ.ಕಾಂ. ಪದವಿ ಪಡೆದ ಇವರು 'ನೀರೆಯರ ಮನ' ಎಂಬ ಲೇಖನವನ್ನು ಪ್ರಕಟಿಸುವಾಗ 'ವೈದೇಹಿ' ಎಂಬ ಕಾವ್ಯನಾಮವನ್ನು ರೂಢಿಸಿಕೊಂಡರು. ತಮ್ಮ ಭಾಷೆಯ ವಿಶಿಷ್ಟ ಬಳಕೆ ಮತ್ತು ಸ್ತ್ರೀಲೋಕದ ಸೂಕ್ಷ್ಮ ಅನಾವರಣಗಳಿಂದ ಇವರು ನಾಡಿನ ಪ್ರಮುಖ ಲೇಖಕಿಯಾಗಿ

ಪ್ರಸಿದ್ಧರಾಗಿದ್ದಾರೆ. ಕವಿತೆ ಮತ್ತು ಸಣ್ಣ ಕಥೆಗಳಲ್ಲದೆ, ಮಕ್ಕಳ ನಾಟಕ, ಲಲಿತ ಪ್ರಬಂಧ, ಕಾದಂಬರಿ, ವ್ಯಕ್ತಿ ಚಿತ್ರಗಳನ್ನು ಬರೆದಿದ್ದಾರೆ. ಬಿಂದು ಬಿಂದಿಗೆ, ಪಾರಿಜಾತ, ಅಸ್ಪೃಶ್ಯರು, ಅಮ್ಮಚ್ಚಿಯಂಬ ನೆನಪು, ಮಲ್ಲನಾಥನ ಧ್ಯಾನ, ಮೇಜು ಮತ್ತು ಬಡಗಿ ಮುಂತಾದವು ಇವರ ಪ್ರಮುಖ ಕೃತಿಗಳು.

ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಎಂ.ಕೆ.ಇಂದಿರಾ ಪ್ರಶಸ್ತಿ, ಅನುಪಮಾ ಪ್ರಶಸ್ತಿ, ಕರ್ನಾಟಕ ಸರಕಾರ ನೀಡುವ 'ದಾನ ಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ', ಮೊದಲಾದ ಪುರಸ್ಕಾರಗಳು ಇವರಿಗೆ ದೊರೆತಿವೆ. ೨೦೦೯ರಲ್ಲಿ 'ಕ್ರೌಂಚಪಕ್ಷಿಗಳು' ಕಥಾ ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ.

ಪ್ರಸ್ತುತ ಕವನವನ್ನು ಅವರ 'ಹೂವ ಕಟ್ಟುವ ಕಾಯಕ' ಕವನ ಸಂಕಲನದಿಂದ ಆಯ್ದುಕೊಳ್ಳಲಾಗಿದೆ.

**ಓದಿ ತಿಳಿಯಿರಿ:**

ಮುಗಿಲು = ಆಕಾಶ, ಗಗನ, ಬಾನು

ತೊಯ್ದ = ಒದ್ದೆಯಾದ, ನೆನೆದ

ಗುಡ್ಡ = ಬೆಟ್ಟ

ಪಕಳೆ = ಎಸಳು, ಹೂವಿನ ದಳ

ಹೊಳೆ = ನದಿ, ಪ್ರಕಾಶಿಸು

ಅಲೆ = ತರಂಗ, ತೆರೆ

ನೊರೆ = ನೀರಿನ ಮೇಲಿನ ಬುರುಗು, ಗಾಳಿಗುಳ್ಳೆ

ಸಾವಧಾನ = ನಿಧಾನ, ಸಾವಕಾಶ

ಹಸುಳೆ = ಎಳೆ ಮಗು, ಹಸುಗೂಸು

ಜೋಲಿ = ತೊಟ್ಟಿಲು

ತಾರೆ = ನಕ್ಷತ್ರ



## ಅಭ್ಯಾಸ

**ಅ. ಒಂದು ವಾಕ್ಯದಲ್ಲಿ ಉತ್ತರಿಸಿರಿ**

೧. ಎಲ್ಲಕ್ಕಿಂತ ಚಂದ ಯಾವುದು?

೨. ಎಂತಹ ಗುಡ್ಡ ಬೆಟ್ಟ ಚಂದ?

೩. ಹರಿವ ಹೊಳೆಯ ಏನು ಚಂದ?

೪. ಎಂಥ ಗಾಳಿ ಚಂದ?

೫. ಎಂಥ ನವಿಲು ಚಂದ?

೬. ಬುಗುರಿ ಹೇಗೆ ತಿರುಗುತ್ತದೆ?

೭. ಕರಿ ಕಂಗಳಲ್ಲಿ ಎಂತಹ ಚಂದವಿದೆ?

೮. ವೈದೇಹಿಯವರ ನಿಜವಾದ ಹೆಸರೇನು?

**ಆ. ಎರಡು ವಾಕ್ಯಗಳಲ್ಲಿ ಉತ್ತರಿಸಿರಿ**

೧. ಕವಯತ್ರಿ ಪಕ್ಷಿಗಳಲ್ಲಿ ಎಂತಹ ಚೆಲುವನ್ನು ಕಂಡಿದ್ದಾರೆ?

೨. ಕವಯತ್ರಿಯು ತೊಟ್ಟಿಲಿನ ಬಗ್ಗೆ ಹೇಗೆ ಬಣ್ಣಿಸಿದ್ದಾರೆ?

೩. ತೊಟ್ಟಿಲಿನ ನಗುವ ಹಸುಳೆಯ ಚಂದವನ್ನು ಹೇಗೆ ವರ್ಣಿಸಿದ್ದಾರೆ?

**ಇ. ಐದು / ಆರು ವಾಕ್ಯಗಳಲ್ಲಿ ಉತ್ತರಿಸಿರಿ**

೧. ತೊಟ್ಟಿಲು ತೂಗುವ ಕವಿತೆಯಲ್ಲಿ ವ್ಯಕ್ತವಾದ ತೊಟ್ಟಿಲನ್ನು ಕುರಿತ ಕಾಳಜಿ ಎಂಥದು?

೨. 'ತೊಟ್ಟಿಲು ತೂಗುವ ಹಾಡು' ಕವಿತೆಯ ಆಶಯವನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ.

## ಭಾಷಾಭ್ಯಾಸ

**ಅ. ಹೊಂದಿಸಿ ಬರೆಯಿರಿ:**

| | ಅ | ಆ |
|---|---|---|
| ೧. | ಹರಿವ | ಗಾಳಿ |
| ೨. | ಬೀಸುವ | ಹೊಳೆ |
| ೩. | ತಿರುಗುವ | ತಾರೆ |
| ೪. | ಮಿನುಗುವ | ಬುಗರಿ |
| ೫. | ತೂಗುವ | ಲಾಲಿ |
| ೬. | ಹಾಡುವ | ದೋಣಿ |
| ೭. | ತೇಲುವ | ತೊಟ್ಟಿಲು |

**ಆ. ಈ ಪದಗಳನ್ನು ಸ್ವಂತ ವಾಕ್ಯದಲ್ಲಿ ಬಳಸಿ ಬರೆಯಿರಿ:**

ಹೊಳೆ, ಗಾಳಿ, ಸಾವಧಾನ, ಮನೆ, ನವಿಲು

**ಇ. ಬಿಟ್ಟ ಸ್ಥಳ ತುಂಬಿರಿ:**

೧. ಮಿಟ್ಟೆ ಹೂ _______ ಚೆಂದ

೨. ಗಾಳಿ _______ ಹಾಯಿ ಚಂದ

೩. ಗಿರಿಗಿರಿ _______ ಚಂದ

೪. ಮಿರಿ ಮಿನುಗುವ _______ ಚಂದ

೫. _______ ನಗುವ ಹಸುಳೆ ಚಂದ

೬. ವೈದೇಹಿಯವರ ಬಾಲ್ಯದ ಹೆಸರು _______

**ಈ. ವಿರುದ್ಧಾರ್ಥಕ ರೂಪಗಳನ್ನು ಬರೆಯಿರಿ:**

ಕರಿ, ನಗು

**ಉ. ವಿವಿಧಾರ್ಥಕ ಪದಗಳನ್ನು ಬರೆಯಿರಿ:**

ಮುಗಿಲು, ಹೊಳೆ, ತಾರೆ

**ಊ. ಈ ಪದ್ಯದಲ್ಲಿ ಬಂದಿರುವ ಅನುಕರಣಾವ್ಯಯ ಪದಗಳನ್ನು ಆರಿಸಿ ಬರೆಯಿರಿ:**

**ಋ. ಈ ಪದ್ಯದಲ್ಲಿ ಬಂದಿರುವ ದ್ವಿರುಕ್ತಿ ಪದಗಳನ್ನು ಆರಿಸಿ ಬರೆಯಿರಿ:**

**ಚಟುವಟಿಕೆ:**

೧. ನಿಮ್ಮ ಸುತ್ತಮುತ್ತಲಿನ ಜೋಗುಳದ ಪದಗಳನ್ನು ಸಂಗ್ರಹಿಸಿ ರಾಗವಾಗಿ ಹಾಡಿರಿ.

# ೮. ಬುಡ್ಡು ಸಾಹೇಬರು ಬೆಟ್ಟ ಹತ್ತಿದ್ದು

– ಡಿ.ವಿ.ಜಿ.

**ಪ್ರವೇಶ ಮತ್ತು ಆಶಯ :**

ಪ್ರಸ್ತುತ ಗದ್ಯವು ಅಂದಿನ ಶಿಕ್ಷಣ ವ್ಯವಸ್ಥೆಯ ಬಗ್ಗೆ ಬೆಳಕು ಚೆಲ್ಲುವ ಪ್ರಸಂಗವಾಗಿದ್ದು, ಸರಳ ಹಾಗೂ ಹಾಸ್ಯ ಅಂಶಗಳನ್ನು ಒಳಗೊಂಡಿದೆ. ಶಾಲಾ ತಪಾಸಣಾಧಿಕಾರಿಯೊಬ್ಬರು ಶಾಲೆಗಳನ್ನು ಪರೀಕ್ಷಿಸುವುದಕ್ಕಾಗಿ ಪದೇ ಪದೇ ಬರುವುದರಿಂದ ಶಿಕ್ಷಣದ ವ್ಯವಸ್ಥೆ ಉತ್ತಮಗೊಳ್ಳುತ್ತದೆ. ಮಕ್ಕಳ ಸರ್ವತೋಮುಖ ಬೆಳವಣಿಗೆ ಸಾಧ್ಯವಿದೆ ಎಂಬುದಕ್ಕೆ ಈ ಭಾಗ ಒಳ್ಳೆಯ ನಿದರ್ಶನ.

ಯಾವುದೇ ಧರ್ಮವಿರಲಿ ಅವು ತಮ್ಮದೇ ಆದ ಮಹತ್ವ ಹೊಂದಿವೆ. ಹಿಂದೂಗಳು–ದೇವಾಲಯಗಳನ್ನು, ಕ್ರೈಸ್ತರು–ಚರ್ಚುಗಳನ್ನು, ಮುಸಲ್ಮಾನರು–ದರ್ಗಾಗಳನ್ನು, ಪವಿತ್ರವಾದವುಗಳೆಂದು ಭಾವಿಸುತ್ತಾರೆ. ವಿದ್ಯಾರ್ಥಿಗಳ ಸಾಮೂಹಿಕ ಒಗ್ಗಟ್ಟಿನಿಂದ ಎಂತಹ ಕಷ್ಟದ ಕೆಲಸವನ್ನೂ ಸುಲಭವಾಗಿ ಮಾಡಬಹುದು. ಯುವ ಶಕ್ತಿ ದೇಶದ ಅಭಿವೃದ್ಧಿಗೆ ಬೇಕು. ಹಾಗೆಯೆ ಒಳ್ಳೆಯ ಶಿಕ್ಷಣವು ಬೇಕು, ಶಿಕ್ಷಕರು ಹಾಗೂ ಮಕ್ಕಳಲ್ಲಿ ಆತ್ಮೀಯವಾದ ಸಂಬಂಧ, ವಾತಾವರಣ ಇರಬೇಕು. ಇವುಗಳನ್ನು ಎಲ್ಲರೂ ಸಾಮೂಹಿಕವಾಗಿ ಪ್ರವಾಸ ಹೋಗುವ ಮೂಲಕ ಗಟ್ಟಿಗೊಳಿಸಬಹುದು. ಧಾರ್ಮಿಕ ಸಾಮರಸ್ಯಕ್ಕೆ ಈ ಭಾಗ ಒಳ್ಳೆಯ ನಿದರ್ಶನ.

ಜನಾಬ ಮಹಮದ ಬುಡನ್‌ಖಾನ್ ಸಾಹೇಬರು ಉರ್ದು ಸ್ಕೂಲುಗಳ ಇನ್‌ಸ್ಪೆಕ್ಟರು. ಅವರು ತಮ್ಮ ಊರಿನಲ್ಲಿದ್ದ ಆಂಗ್ಲೋ–ಹಿಂದೂಸ್ತಾನಿ ಸ್ಕೂಲನ್ನು ಪರೀಕ್ಷಿಸುವುದಕ್ಕಾಗಿ ವರ್ಷಕ್ಕೆ ಒಂದೆರಡು ಸಾರಿ ಬರುತ್ತಿದ್ದರು.

ನಮ್ಮ ಊರಿನಲ್ಲಿ ಮುಸಲ್ಮಾನ ಪ್ರಜೆ ವಿಶೇಷವಾಗಿದ್ದರಿಂದ ಅವರಿಗಾಗಿ ಒಂದು ಪ್ರತ್ಯೇಕ ಸ್ಕೂಲ್. ಆ ಸ್ಕೂಲಿನಲ್ಲಿ ಕನ್ನಡ ಕಲಿಸುವುದಕ್ಕಾಗಿ ಇಬ್ಬರು ಹಿಂದೂ ಉಪಾಧ್ಯಾಯರೂ ಇದ್ದರು. ಸ್ಕೂಲಿನ ಜನಸಂಖ್ಯೆ ನೂರರ ಸುಮಾರು ಇರಬಹುದು. ಸ್ಕೂಲಿನ ಹೆಡ್‌ಮಾಸ್ಟರು ಜನಾಬ ಮುಸ್ತಫಾ ಸಾಹೇಬರು. ಇವರು ಉರ್ದು ಭಾಷೆಯಲ್ಲಿಯೂ ಅರಬ್ಬೀ ಫಾರಸಿಗಳಲ್ಲಿಯೂ ಸಹ ವಿದ್ವಾಂಸರೆಂದು ಹೆಸರಾಗಿದ್ದರು.

ಮುಸ್ತಫಾ ಸಾಹೇಬರು ಒಳ್ಳೆಯವರು. ಸೌಮ್ಯವಾದ ಸ್ವಭಾವ. ಸ್ನೇಹ ಪ್ರವೃತ್ತಿಯುಳ್ಳವರು. ಊರಿನಲ್ಲಿದ್ದ ಎಲ್ಲ ಸ್ಕೂಲುಗಳ ಉಪಾಧ್ಯಾಯರುಗಳೂ ಅವರಿಗೆ ಮನ್ನಣೆಯನ್ನೂ ವಿಶ್ವಾಸವನ್ನೂ ತೋರುತ್ತಿದ್ದರು.

ಇನ್‌ಸ್ಪೆಕ್ಟರವರನ್ನು ನಾವು ಇಲ್ಲಿ ಬುಡ್ಡು ಸಾಹೇಬರೆಂದು ಕರೆಯೋಣ. ಇದೇ ಅವರಿಗೆ ವಿದ್ಯಾರ್ಥಿಗಳು ಇಟ್ಟಿದ್ದ ಹೆಸರು.

ಬುಡ್ಡು ಸಾಹೇಬರು ಮೊದಲನೆಯ ಸಾರಿ ಮುಳುಬಾಗಿಲಿಗೆ ಬಂದಾಗ ಅಲ್ಲಿಯೇ ದರ್ಗಾಕ್ಕೆ ಭೇಟಿ ಕೊಟ್ಟರು. ದರ್ಗಾ ಎನ್ನುವುದು ಮಹಮ್ಮದೀಯ ಸಾಧು ಸಂತರ ಸಮಾಧಿಗಳಿರುವ ಸ್ಥಳ. ಅದು ಪವಿತ್ರಸ್ಥಳ, ಯಾತ್ರಾಸ್ಥಳ.

ಮುಳುಬಾಗಿಲಿನ ದರ್ಗಾ ಪ್ರಸಿದ್ಧವಾದದ್ದು. ಎಂಟು ವರ್ಷಕ್ಕೋ ಹತ್ತು ವರ್ಷಕ್ಕೋ ಒಂದು ಸಾರಿ ಜಾತ್ರೆ ನಡೆಯುತ್ತಿತ್ತು. ಆ ಜಾತ್ರೆಗೆ ಉರ್ಸ್ ಎಂದು ಹೆಸರು. ಅದಕ್ಕಾಗಿ ಪೆನುಕೊಂಡೆ, ಚಿತ್ತೂರು, ಪುಂಗನೂರು ಮೊದಲಾದ ಕಡೆಗಳಿಂದಲೂ ಮುಳುಬಾಗಿಲಿನ ಸುತ್ತಮುತ್ತಲಿನ ಪ್ರದೇಶಗಳಿಂದಲೂ ಭಕ್ತಾದಿಗಳು

ತಂಡ ತಂಡವಾಗಿ ಬರುತ್ತಿದ್ದರು. ಒಂದು ಕಟ್ಟುಪಾಡಿನಂತೆ ಗೊತ್ತಾದ ಒಬ್ಬ ಫಕೀರನು ದರ್ಗಾದಲ್ಲಿ ಗೊತ್ತಾದ ಕಡೆ ದೀಕ್ಷಾಬದ್ಧನಾಗಿ ಕುಳಿತು ಜನಕ್ಕೆ ದರ್ಶನ ಕೊಡುವನು. ಅವನ ಪಕ್ಕದಲ್ಲಿ ಒಂದು ನವಿಲು ಗರಿಗಳ ಕಟ್ಟು- ಆಶೀರ್ವಾದ ಮಾಡುವುದಕ್ಕಾಗಿ. ಮುಂದುಗಡೆ ಆಲಮಡ್ಡಿ, ಊದುಬತ್ತಿ ಮೊದಲಾದ ಪರಿಮಳ ದ್ರವ್ಯಗಳು. ಕೆಲಮಂದಿ ಪಂಜರದಲ್ಲಿ ಒಂದು ಪಕ್ಷಿಯನ್ನಿರಿಸಿ ಕೊಂಡಿರುತ್ತಿದ್ದರು.

ಫಕೀರರಲ್ಲಿ ನಾಲ್ಕು ಪಂಗಡಗಳುಂಟಂತೆ. ಆ ನಾಲ್ಕರಲ್ಲಿ ಒಂದೊಂದು ಪಂಗಡಕ್ಕೆ ಒಂದೊಂದು ಪರ್ಯಾಯ. ಈ ಪರ್ಯಾಯ ವ್ಯವಸ್ಥೆಯ ತಪಶೀಲುಗಳು ನನ್ನ ಚಿಕ್ಕಜ್ಜಂದಿರಿಗೆ ತಿಳಿದಿತ್ತಂತೆ. ಅದಕ್ಕೆ ಸಂಬಂಧಪಟ್ಟ ದಾಖಲೆ ದೂಖಲೆಗಳು ಅವರಲ್ಲಿದ್ದವಂತೆ. ಈ ಕಾರಣದಿಂದ ದರ್ಗಾಕ್ಕೆ ಸಂಬಂಧಪಟ್ಟ ಜನ ನನ್ನ ತಾತಂದಿರಲ್ಲಿಗೆ ಆಗಾಗ ಬರುವರು. ಗೊತ್ತಾದ ಫಕೀರನು ಗೊತ್ತಾದಷ್ಟು ದಿವಸ–ಎಂಟು ದಿವಸವೋ ಹತ್ತು ದಿವಸವೋ – ಒಂದು ಅಲಂಕೃತವಾದ ಮಂಟಪದಲ್ಲಿ ಪಟ್ಟ ಕುಳಿತು ಆದಮೇಲೆ ಕಡೆಯ ದಿನ ಊರಲ್ಲೆಲ್ಲ ಮೆರವಣಿಗೆ ಬರುವುದು. ನಾಲ್ಕು ಕೋಲುಗಳಿಗೆ ದೊಡ್ಡ ಕನಾತನ್ನು ಕಟ್ಟಿ ಚಪ್ಪರ ಮಾಡುತ್ತಿದ್ದರು. ಆ ಚಪ್ಪರದ ಕೆಳಗೆ ಜೀನು ಹಾಕಿ ಸಿಂಗರಿಸಿದ ಒಂದು ಕುದುರೆ, ಸುತ್ತ ಮುತ್ತ ಜನ ಬರುವರು. ಮೇಳ, ಬೆಳಗುವ ಪಂಜು–ಇದು ಜನರನ್ನು ಆಕರ್ಷಿಸುವುದು. ಕುದುರೆಯ ಬೆನ್ನಿನ ಮೇಲೆ ಒಂದು ಚೀಲದಲ್ಲಿ ಗಂಧದ ಹುಡಿ ಇರುವುದು. ಈ ಗಂಧದ ಹುಡಿಯನ್ನು ಕೊಂಚ ಕೊಂಚ ಪನ್ನೀರು ಅತ್ತರುಗಳನ್ನು ಪ್ರಮುಖ ಜನರ ಮನೆಗಳಿಗೆ ಹಂಚುವರು.

ಬುಡ್ಡು ಸಾಹೇಬರು ನಿಜವಾಗಿ ಭಕ್ತರು. ಅವರಿಗೆ ತಮ್ಮ ಮತ ತತ್ತ್ವಗಳಲ್ಲಿಯೂ ಶಾಸ್ತ್ರಗಳಲ್ಲಿಯೂ ಗಾಢವಾದ ನಂಬಿಕೆ, ಅವರು ದರ್ಗಾಕ್ಕೆ ಭೇಟಿ ಕೊಟ್ಟಾಗ ಅಲ್ಲಿ ಒಬ್ಬ ವೃದ್ಧರು ಅವರಿಗೆ ದರ್ಗಾದ ಇತಿಹಾಸವನ್ನು ಹೇಳುತ್ತ ಅಲ್ಲಿರುವ ಮುಖ್ಯ ಸಮಾಧಿಯು ಹೈದರ ವಲಿ ಎಂಬ ಮಹಾತಪಸ್ವಿಯದೆಂದೂ ಆ ಹೈದರ್ ವಲಿ ಬೆಟ್ಟದ ತುದಿಯಲ್ಲಿ ಇರುವ ಗುಹೆಯಲ್ಲಿ ತಪಸ್ಸು ಮಾಡುತ್ತಿದ್ದಾನೆಂದೂ ಅಲ್ಲಿರುವ ದೋಣೆಯಲ್ಲಿ ಆತ ಸ್ನಾನ ಮಾಡುತ್ತಿದ್ದನೆಂದೂ ತಿಳಿಸಿದರು.





ಈ ವೃತ್ತಾಂತ ಬುಡ್ಡು ಸಾಹೇಬರಿಗೆ ತುಂಬ ಕೌತುಕವನ್ನುಂಟು ಮಾಡಿತು. ತಾವು ಆ ಗವಿಗೆ ಹೋಗಬೇಕೆಂದೂ ಆ ದೋಣಿಯನ್ನು ನೋಡಬೇಕೆಂದೂ ಇಷ್ಟಪಟ್ಟು ತಮ್ಮ ಕೋರಿಕೆಯನ್ನು ಮುಸ್ತಫಾ ಸಾಹೇಬರು ಮೊದಲಾದ ಸ್ಕೂಲು ಮೇಷ್ಟರುಗಳಿಗೆ ಹೇಳಿದರು.

ಆ ಮೇಷ್ಟರುಗಳು ಒಬ್ಬರ ಮುಖ ಒಬ್ಬರು ನೋಡಿಕೊಂಡು ಕೊಂಚ ಪಿಸುಮಾತನಾಡಿಕೊಂಡು ಕಡೆಗೆ "ಆಗಬಹುದು ಏರ್ಪಾಟು ಮಾಡೋಣ. ನಾಲ್ಕೈದು ದಿನ ಬಿಡುವು ಕೊಟ್ಟರೆ ತಜವೀಜು ನಡೆಸುವುದಾಗುತ್ತೆ" ಎಂದು ಬಿನ್ನವಿಸಿದರು. ಬುಡ್ಡು ಸಾಹೇಬರು "ಆಗಲಿ ಈಗ ಅವಸರವಿಲ್ಲ. ಅಕ್ಟೋಬರ ನವೆಂಬರ ತಿಂಗಳ ವೇಳೆಗೆ ಮತ್ತೆ ನಾನು ಬರುತ್ತೇನೆ. ಆಗ ಬೆಟ್ಟ ಹತ್ತೋಣ" ಎಂದರು.

ಈಗ ಬುಡ್ಡು ಸಾಹೇಬರ ವ್ಯಕ್ತಿ ಸ್ವರೂಪವನ್ನು ಗಮನಿಸಿಬೇಕು. ಅವರ ವಯಸ್ಸು ಆಗ ಸುಮಾರು ನಲವತ್ತೈದು. ಬಣ್ಣ ಕಪ್ಪು ಮಿಶ್ರವಾದ ಕಂದು ಬಣ್ಣ. ಆಳು ಎತ್ತರ ಮತ್ತು ದೇಹದ ಮಧ್ಯಭಾಗದಲ್ಲಿ ಬಹುಸ್ಥೂಲ. ಗಂಟಲು ದೊಡ್ಡದು. ಆಕಾರ ಘನವಾದದ್ದು. ಇಂಥವರನ್ನು ಬೆಟ್ಟ ಹತ್ತಿಸುವುದೆಂದರೆ ಮೇಷ್ಟರುಗಳಿಗೆ ಕೊಂಚ ಯೋಚನೆ.

ನವಂಬರ ತಿಂಗಳು ಬಂದಿತು. ಬುಡ್ಡು ಸಾಹೇಬರು ಊರಿಗೆ ಬಂದಿಳಿದರು. ಮೇಷ್ಟರುಗಳೆಲ್ಲ ಅವರನ್ನು ಕಂಡು ಹೇಳಿದರು.

"ಏರ್ಪಾಟೆಲ್ಲ ಆಗಿದೆ. ಶನಿವಾರ ಬೆಳಗ್ಗೆ, ಕತ್ತಲು ಕತ್ತಲಾಗಿರುವಾಗಲೇ ಪರ್ವತಾರೋಹಣಕ್ಕೆ ಸಕಾಲ" ಸಾಹೇಬರು "ಆಗಬಹುದು, ನಾನು ಸಿದ್ಧನಾಗಿರುತ್ತೇನೆ."

ಈ ವೇಳೆಗೆ ಮೇಷ್ಟರುಗಳು ಮಾಡಿಕೊಂಡಿದ್ದ ಸಿದ್ಧತೆ, ನಾಲ್ಕು ದಪ್ಪನೆಯ ಹೊರಜೆ ಹಗ್ಗಗಳು. ಒಂದು ನೂರು ಕಲ್ಲುಸಕ್ಕರೆ ದ್ರಾಕ್ಷಿ ಖರ್ಜೂರ ಚೂರುಗಳ ಪೊಟ್ಟಣಗಳು. ನೂರೈವತ್ತು ಇನ್ನೂರು ಮಂದಿ ಹುಡುಗರು. ಈ ಹುಡುಗರಲ್ಲಿ ಎಲ್ಲ ಮತಗಳವರೂ ಇದ್ದರು. ಬ್ರಾಹ್ಮಣರೂ ಇದ್ದರು. ಆ ಶನಿವಾರದ ಹಿಂದಿನ ದಿವಸ ಮೇಷ್ಟರುಗಳು ತಮ್ಮ ವಿದ್ಯಾರ್ಥಿಗಳಿಗೆಲ್ಲ ತಾಕೀತು ಮಾಡಿದ್ದರು.

ಶನಿವಾರ ಸ್ಕೂಲಿಗೆ ರಜಾ. ಆದರೆ ನೀವು ಬೆಳಗ್ಗೆ ಐದು ಘಂಟೆಯ ವೇಳೆಗೆ, ಬೆಳಗಾಗುವುದಕ್ಕೆ ಮುಂಚೆ ಬೆಟ್ಟದಡಿಯಲ್ಲಿ ಗೋಪಾಲಕೃಷ್ಣಸ್ವಾಮಿ ಗುಡಿಯ ಹತ್ತಿರ ಸೇರಿರತಕ್ಕದ್ದು. ಅಲ್ಲಿಂದ ಬೆಟ್ಟ ಹತ್ತುವುದರಲ್ಲಿ ನಮ್ಮ ಜೊತೆ ಬರತಕ್ಕದ್ದು. ನಾವು ಹೇಳಿದಂತೆ ಎಳೆಯತಕ್ಕದ್ದು, ಅಥವಾ ತಳ್ಳತಕ್ಕದ್ದು. ಅಲ್ಲಲ್ಲಿ ನಾವು ಹೇಳಿದಾಗ ನಿಲ್ಲತಕ್ಕದ್ದು. ಹತ್ತು ಹನ್ನೊಂದು ಘಂಟೆಯ ವೇಳೆಗೆ ಹಿಂತಿರುಗುತ್ತೇವೆ. ಆಗ ಅಲ್ಲಿಗೆ ನಿಮ್ಮ ನಿಮ್ಮ ಮನೆಗಳವರು ಊಟ ತಂದಿರುವಂತೆ ಹೇಳಿರತಕ್ಕದ್ದು. ತೋಪಿನಲ್ಲಿ ಎಲ್ಲರೂ ಊಟ ಮಾಡಿದ್ದಾದ ಮೇಲೆ ನಿಮ್ಮ ನಿಮ್ಮ ಮನೆಗೆ ನೀವು ನೀವು ಹೋಗತಕ್ಕದ್ದು.

ಏರ್ಪಾಟಿನಂತೆ ವಿದ್ಯಾರ್ಥಿಗಳು ಕೋಲಾಹಲದಿಂದ ಸೇರಿದರು. ಮೇಷ್ಟರುಗಳೆಲ್ಲ ಉತ್ಸಾಹದಿಂದ ಬಂದಿದ್ದರು. ಇನ್‌ಸ್ಪೆಕ್ಟರು ಸಾಹೇಬರು ದಯಮಾಡಿಸಿದರು. ಎಲ್ಲರೂ "ಅಲ್ಲಾ ಹೋ ಅಕ್ಬರ್" ಎಂದು ಪ್ರಾರ್ಥನೆ ಘೋಷಿಸಿ ಬೆಟ್ಟ ಹತ್ತಲು ಮೊದಲು ಮಾಡಿದರು. ಅಷ್ಟರಲ್ಲಿ ನಾಲ್ವರೈವರು ಮೇಷ್ಟರುಗಳು ಮುಂದೆ ಬಂದು ಸಾಹೇಬರ ನಡುವಿಗೆ ಒಂದು ಬಲವಾದ ನಡುಕಟ್ಟನ್ನು ಬಿಗಿದರು. ಆಗ ನಡುಕಟ್ಟಿನ ನಾಲ್ಕು ದಿಕ್ಕುಗಳಲ್ಲಿ – ಎಡಕ್ಕೆ ಮುಂದೆ ಒಂದು ಹಿಂದೆ ಒಂದು, ಬಲಕ್ಕೆ ಹಿಂದೆ ಒಂದು ಮುಂದೆ ಒಂದು ಹೀಗೆ ಹೊರಜೆ ಹಗ್ಗಗಳನ್ನು ಕಟ್ಟಿ ತೇರನ್ನು ಎಳೆಯಲು ನಿಂತಂತೆ ಹುಡುಗರು ಹಗ್ಗಗಳನ್ನು ಹಿಡಿದು ನಿಂತರು. ದೊಡ್ಡವರಾದ ಕೆಲಮಂದಿ ವಿದ್ಯಾರ್ಥಿಗಳನ್ನು ಸಾಹೇಬರ ಪೃಷ್ಠ ಭಾಗದಲ್ಲಿ ನಿಲ್ಲಿಸಿ ಅದನ್ನು

ಅದುಮಿ ಹಿಡಿದು ಕೊಂಡಿರುವಂತೆ ಹೇಳಿದರು. ಇಬ್ಬರು ಮೂವರು ಮೇಷ್ಟರುಗಳು ಮುಂದುಗಡೆ ಎರಡು ಪಕ್ಕಗಳಲ್ಲೂ ನಿಂತು ಹಗ್ಗಗಳನ್ನು ಮೆತ್ತಗೆ, ಹಗುರವಾಗಿ ಸೆಳೆಯುವರು. ಸಾಹೇಬರು ಹೆಜ್ಜೆಯನ್ನೆತ್ತಿ ಮುಂದಿಡುವರು. ಹೀಗೆ ಹೆಜ್ಜೆ ಹೆಜ್ಜೆಯಾಗಿ ಸವಾರಿ ಮುಂದಕ್ಕೆ ಬೆಳೆಯಿತು. ಮುಂದುಗಡೆಯು ಎರಡು ಹಗ್ಗಗಳ ಸೆಳತದಿಂದ ಅವರಿಗೆ ಬಲ. ಹಿಂದುಗಡೆಯ ಎರಡು ಒತ್ತಡದಿಂದಲೂ ಬಲ. ಹೀಗೆ ಹತ್ತಿಪ್ಪತ್ತು ಹೆಜ್ಜೆಗಳಾದಾಗ ಸಾಹೇಬರಿಗೆ ಆಯಾಸವಾಗುವುದು. ಅವರು ಕೈಸನ್ನೆಯಿಂದ ಅದನ್ನು ತೋರಿಸುವರು. ಆಗ ಮೇಷ್ಟರುಗಳು "ಅಲ್ಲಾ ಹೋ ಅಕ್ಬರ್" ಎಂದು ಕೂಗುವರು. ಆಗ ದಂ ತೆಗೆದು ಕೊಳ್ಳುವುದಕ್ಕಾಗಿ ಎಲ್ಲರೂ ನಿಲ್ಲುವರು. ಈಗ ಕಲ್ಲುಸಕ್ಕರೆ ದ್ರಾಕ್ಷಿ ಖರ್ಜೂರಗಳ ಸಮಾರಾಧನೆ. ಹುಡುಗರಿಗೆಲ್ಲ ಒಂದೊಂದು ಪೊಟ್ಟಣ ಕೊಡುವರು.

ಹೀಗೆ ಸಾಗಿ ಶಿಖರವನ್ನು ತಲುಪುವ ವೇಳೆಗೆ ಸುಮಾರು ಒಂಬತ್ತೂವರೆ ಗಂಟೆ ಆಯಿತು. ಅಲ್ಲಿ ಕೊಂಚ ವಿಶ್ರಾಂತಿ ಸಾಹೇಬರು ನೋಡಬೇಕಾದದ್ದನ್ನೆಲ್ಲ ನೋಡಿ ಸಂತೋಷ ವ್ಯಕ್ತಪಡಿಸಿದ ಬಳಿಕ ಅವರೋಹಣ ಪ್ರಾರಂಭ. ಆದರೆ ಈಗ ಹಗ್ಗಗಳ ಎಳೆತ ಹಿಂದುಗಡೆಯಿಂದ. ಮತ್ತು ಹಿಂಭಾಗ ಒತ್ತಡವಿಲ್ಲ. ಇಳಿಯುವ ಅವಸರದಲ್ಲಿ ಸಾಹೇಬರು ಮುಗ್ಗರಿಸಬಾರದು. ಆದ್ದರಿಂದ ಅವರ ವೇಗವನ್ನು ಹಿಂಬದಿಯಿಂದ ತಡೆಯತಕ್ಕದ್ದು. ಈಗ ಅಲ್ಲಲ್ಲಿ ಮಜಲು ಮಾಡುವ ಅವಶ್ಯಕತೆ ಕಡಿಮೆ. ಎಲ್ಲೋ ಮೂರು ನಾಲ್ಕು ಕಡೆಗಳಲ್ಲಿ ಮಾತ್ರ. ಬೆಟ್ಟದ ಅಡಿ ಸೇರುವ ವೇಳೆಗೆ ಘಂಟೆ ಹನ್ನೆರಡಕ್ಕೆ ಮೇಲಾಗಿತ್ತು. ಶೀತಕಾಲವಾದದ್ದರಿಂದ ಯಾರಿಗೂ ಹೆಚ್ಚು ಆಯಾಸ ತೋರಲಿಲ್ಲ.

ಮಾರನೆಯ ದಿನ ಭಾನುವಾರ. ಆ ಮಧ್ಯಾಹ್ನ ಆಂಗ್ಲೋ–ಹಿಂದೂಸ್ಥಾನಿ ಸ್ಕೂಲು ಕಟ್ಟಡದಲ್ಲಿ ಉಪಾಧ್ಯಾಯರೂ ಶಿಷ್ಯರುಗಳೂ ಎಲ್ಲ ಸೇರಿದ್ದರು. ಇನ್‌ಸ್ಪೆಕ್ಟರ ಸಾಹೇಬರ ಸವಾರಿ ಅಲ್ಲಿಗೆ ಬಂದಿತು. ಅವರು ಎಲ್ಲರಿಗೂ ತಮ್ಮ ಕೃತಜ್ಞತೆಯನ್ನು ತಿಳಿಸಿ "ದೇವರು ಶುಭ ಮಾಡಲಿ" ಎಂದು ಕೋರಿದ್ದಲ್ಲದೆ ಎಲ್ಲರಿಗೂ ಕೊಂಚ ಕೊಂಚ ಸಕ್ಕರೆ ಹಂಚಿದರು (ಅದು ಮುಳುಬಾಗಿಲಿನ ಮೊಗದುಂ ಸಕ್ಕರೆ ಕಾಷ್ಠಿ ಮದಾರ ಸಾಹೇಬರ ಮಳಿಗೆಯದು.)

ಇಂಥಾದ್ದು ನನ್ನ ಚಿಕ್ಕಂದಿನ ಕಾಲ.

**ಲೇಖಕರ ಪರಿಚಯ:**



ಡಿ.ವಿ.ಜಿ. ಎಂದೇ ಪ್ರಸಿದ್ಧರಾಗಿರುವ ದೇವನಹಳ್ಳಿ ವೆಂಕಟರಮಣಯ್ಯ ಗುಂಡಪ್ಪ ಅವರು ಕೋಲಾರ ಜಿಲ್ಲೆಯ ಮುಳಬಾಗಿಲಿನವರು. ಇವರು ೧೮೮೭ರಲ್ಲಿ ಜನಿಸಿದರು. ಪತ್ರಿಕೋದ್ಯಮಿಯಾಗಿ, ಸಮಾಜ ಸೇವಕರಾಗಿ ಜನಪ್ರಿಯರಾಗಿದ್ದು, ಸಾಹಿತಿಯೂ ಆಗಿ ಪ್ರಸಿದ್ಧರಾಗಿದ್ದಾರೆ. ೧೯೩೨ರಲ್ಲಿ ಮಡಿಕೇರಿಯಲ್ಲಿ ಸಮಾವೇಶಗೊಂಡ ೧೮ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಇವರು "ಮಂಕುತಿಮ್ಮನ ಕಗ್ಗ", "ಮರುಳು ಮುನಿಯನ ಕಗ್ಗ", "ಉಮರನ ಒಸಗೆ", "ಶೃಂಗಾರ ಮಂಗಳಂ", "ಜ್ಞಾಪಕ ಚಿತ್ರಶಾಲೆ", "ಅಂತಃಪುರ ಗೀತೆಗಳು", ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಇವರು ಬೆಂಗಳೂರಿನಲ್ಲಿ ಗೋಖಲೆ ಸಾರ್ವಜನಿಕ ಸಂಸ್ಥೆಯನ್ನು ಸ್ಥಾಪಿಸಿದ್ದಾರೆ.

ಡಿ.ವಿ.ಜಿ. ಅವರ "ಶ್ರೀಮದ್ಭಗವದ್ಗೀತಾ ತಾತ್ಪರ್ಯ ಅಥವಾ ಜೀವನ ಧರ್ಮಯೋಗ" ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ. ೧೯೬೧ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಗೌರವ ಡಾಕ್ಟರೇಟ್ ಪ್ರಶಸ್ತಿಯೂ ದೊರಕಿದೆ.

"ಬುಡ್ಡು ಸಾಹೇಬರು ಬೆಟ್ಟ ಹತ್ತಿದ್ದು" ಗದ್ಯ ಭಾಗವನ್ನು 'ಡಿ.ವಿ.ಜಿ. ಕೃತಿ ಶ್ರೇಣಿ–೮' ರಿಂದ ಆರಿಸಲಾಗಿದೆ.

**ಓದಿ ತಿಳಿಯಿರಿ**

ಪರ್ಯಾಯ = ಇನ್ನೊಂದು

ತಪಶೀಲು = ಪೂರ್ಣವಾದ ವಿವರಣೆಗಳಿಂದ ಕೂಡಿದ ಹೇಳಿಕೆಗಳ ಪಟ್ಟಿ

ಕನಾತ = ಡೇರೆಯಲ್ಲಿರುವ ಬಟ್ಟೆಯ ಗೋಡೆ

ಜೀನು = ಕುದುರೆ ಥಡಿ

ಗಂಧದ ಹುಡಿ = ಶ್ರೀಗಂಧದ ಹಿಟ್ಟು, ಪುಡಿ, ಚೂರ್ಣ

ಅತ್ತರು = ಸುಗಂಧ ದ್ರವ್ಯ

ಪನ್ನೀರು = ಪರಿಮಳಯುಕ್ತ ನೀರು, ಗುಲಾಬಿ ಹೂ ನೀರು

ವೃತ್ತಾಂತ = ಸಮಾಚಾರ, ಸುದ್ದಿ , ಕೊಂಚ = ಸ್ವಲ್ಪ

ಪರ್ವತಾರೋಹಣ = ಬೆಟ್ಟ ಗುಡ್ಡಗಳನ್ನು ಏರುವುದು

ಹೊರಜೆ = ದಪ್ಪವಾದ ಹಗ್ಗ

ಏರ್ಪಾಟು = ಸಿದ್ಧತೆ, ತಯಾರು

ಕೈಸನ್ನೆ = ಕೈಯಿಂದ ಸೂಚಿಸುವುದು

ಅವರೋಹಣ = ಇಳಿಯುವುದು, ಕೆಳಕ್ಕೆ ಬರುವುದು

ಪೃಷ್ಠಭಾಗ = ಹಿಂಭಾಗ, ಹಿಂಬದಿ, ಶರೀರದ ಹಿಂಭಾಗ

ಪೊಟ್ಟಣ = ಕಟ್ಟು, ಗಂಟು

ಕೃತಜ್ಞತೆ = ಧನ್ಯವಾದ

ಪಂಗಡ = ಗುಂಪು, ಉಪಭಾಗ, ಉಪಜಾತಿ

**ಗಮನಿಸಿರಿ**

ಫಕೀರ = ಮಹಮ್ಮದೀಯ ಸಂನ್ಯಾಸಿ, ಮುಸಲ್ಮಾನ ಸಾಧು, ಸಂತ

ದೀಕ್ಷಾಬದ್ಧ = ವಿಧಿಬದ್ಧ, ಗುರುಶಿಷ್ಯನಿಗೆ ಅನುಗ್ರಹಿಸುವ ಮನಸಂಸ್ಕಾರ ವಿಶೇಷ

ಉರ್ಸ್ = ಜಾತ್ರೆ, ಮಹಮ್ಮದೀಯ ಸಾಧುಗಳ ಪುಣ್ಯತಿಥಿ

ದರ್ಗಾ = ಮಹಮ್ಮದೀಯ ಸಾಧು ಸಂತರ ಸಮಾಧಿ ಸ್ಥಳ

ಆತ್ಮಕಥೆ = ತಮ್ಮ ಜೀವನವನ್ನು ಕುರಿತು ತಾವೇ ಬರೆದ ಜೀವನ ಚರಿತ್ರೆ

ತಾಕೀತು = ವಿಶೇಷವಾದ ಸೂಚನೆ

# ಅಭ್ಯಾಸ

**ಅ. ಒಂದು ವಾಕ್ಯದಲ್ಲಿ ಉತ್ತರಿಸಿರಿ**

೧. ಉರ್ದು ಸ್ಕೂಲುಗಳ ಇನ್‌ಸ್ಪೆಕ್ಟರರ ಹೆಸರೇನು?

೨. ಉರ್ದು ಸ್ಕೂಲಿನ ಹೆಡ್‌ಮಾಸ್ಟರರ ಹೆಸರೇನು?

೩. ಬುಡ್ಡು ಸಾಹೇಬರು ಯಾವ ದರ್ಗಾಕ್ಕೆ ಭೇಟಿ ಕೊಟ್ಟರು?

೪. ಫಕೀರರಲ್ಲಿ ಎಷ್ಟು ಪಂಗಡಗಳಿವೆ?

೫. ಮುಳುಬಾಗಿಲಿನ ಉರ್ಸ್ ಯಾವಾಗ ನಡೆಯುತ್ತಿತ್ತು?

೬. ಬುಡ್ಡು ಸಾಹೇಬರಿಗೆ ಯಾವುದಲ್ಲಿ ನಂಬಿಕೆ ಇತ್ತು?

೭. ಬುಡ್ಡು ಸಾಹೇಬರು ಯಾವಾಗ ಬೆಟ್ಟ ಹತ್ತೋಣ ಎಂದರು?

೮. ಬುಡ್ಡು ಸಾಹೇಬರು ಬೆಟ್ಟ ಹತ್ತುವಾಗ ಅವರ ವಯಸ್ಸು ಎಷ್ಟಿತ್ತು?

೯. ಮೇಷ್ಟರುಗಳು ವಿದ್ಯಾರ್ಥಿಗಳಿಗೆ ಎಲ್ಲಿ ಸೇರಬೇಕೆಂದು ಹೇಳಿದರು?

೧೦. ಸಾಹೇಬರು ಕೈಸನ್ನೆ ಮಾಡಿದಾಗ ಮೇಷ್ಟರುಗಳು ಏನೆಂದು ಘೋಷಣೆ ಕೂಗಿದರು?

**ಆ. ಎರಡು ವಾಕ್ಯದಲ್ಲಿ ಉತ್ತರಿಸಿರಿ:**

೧. ಬುಡೇನ ಸಾಹೇಬರು ಯಾರು? ಅವರ ಕೆಲಸವೇನು?

೨. ಮುಸ್ತಫಾ ಸಾಹೇಬರ ಗುಣ ಸ್ವಭಾವ ಎಂತಹದು?

೩. ಹೈದರ ವಲಿಯ ವೃತ್ತಾಂತ ಕೇಳಿ ಬುಡ್ಡು ಸಾಹೇಬರಿಗೆ ಕುತೂಹಲ ಉಂಟಾದದ್ದು ಏಕೆ?

೪. ಬುಡ್ಡು ಸಾಹೇಬರ ರೂಪ ಹೇಗಿತ್ತು?

೫. ಮೇಷ್ಟರುಗಳು ವಿದ್ಯಾರ್ಥಿಗಳಿಗೆ ಏನೆಂದು ತಾಕೀತು ಮಾಡಿದರು?

೬. ದ್ರಾಕ್ಷಿ ಖರ್ಜೂರಗಳನ್ನು ಸಾಹೇಬರು ಯಾವಾಗ ಕೊಡುತ್ತಿದ್ದರು?

**ಇ. ಐದು/ ಆರು ವಾಕ್ಯಗಳಲ್ಲಿ ಉತ್ತರಿಸಿರಿ:**

೧. ಬುಡ್ಡು ಸಾಹೇಬರನ್ನು ಬೆಟ್ಟ ಹತ್ತಿಸಿ ಇಳಿಸಿದ್ದು ಹೇಗೆ?

೨. ಉರ್ಸ್ ಸಂದರ್ಭದಲ್ಲಿ ಫಕೀರನ ಕಾರ್ಯ ವಿಶೇಷತೆಗಳೇನು?

**ಈ. ಸಂದರ್ಭ ಸಹಿತ ವಿವರಿಸಿ:**

೧. ಆಗಬಹುದು ಏರ್ಪಾಟು ಮಾಡೋಣ

೨. ಆಗಬಹುದು ಸಿದ್ಧನಾಗಿರುತ್ತೇನೆ

೩. ಅಲ್ಲಾ ಹೋ ಅಕ್ಬರ್

೪. ದೇವರು ಶುಭ ಮಾಡಲಿ

೫. ನಿಮ್ಮ ನಿಮ್ಮ ಮನೆಗೆ ನೀವು ಹೋಗತಕ್ಕದ್ದು.

# ಭಾಷಾಭ್ಯಾಸ

**ಅ. ಬಿಟ್ಟ ಸ್ಥಳ ತುಂಬಿರಿ:**

೧. ಸ್ಕೂಲಿನ ಜನಸಂಖ್ಯೆ ________ ಇರಬಹುದು.

೨. ಮುಸ್ತಫಾ ಸಾಹೇಬರು ಉರ್ದುಭಾಷೆ ಮತ್ತು ________ ಭಾಷೆಗಳ ವಿದ್ವಾಂಸರು ಆಗಿದ್ದರು.

೩. ಕೆಲಮಂದಿ ಪಂಜರದಲ್ಲಿ ________ ಇರಿಸಿಕೊಂಡಿದ್ದರು.

೪. ಕುದುರೆ ಬೆನ್ನಿನ ಚೀಲದಲ್ಲಿ ________ ಇರಬಹುದು.

೫. ಶಿಖರವನ್ನು ತಲುಪಿದಾಗ ________ ಗಂಟೆಯಾಗಿತ್ತು.

೬. ಸಾಹೇಬರು ಕೃತಜ್ಞತೆ ತಿಳಿಸಿ ________ ಹಂಚಿದರು.

೭. ________ ಕಾಲವಾದ್ದರಿಂದ ಯಾರಿಗೂ ಹೆಚ್ಚು ಆಯಾಸ ತೋರಲಿಲ್ಲ.

**ಆ. ಕೆಳಗಿನ ಪದಗಳನ್ನು ಬಿಡಿಸಿ ಸಂಧಿ ಹೆಸರಿಸಿರಿ**

ಶಿಖರವನ್ನು, ನೂರೈವತ್ತು, ನಾಲ್ಕೈದು, ಒಂದೊಂದು

**ಇ. ಸ್ವಂತ ವಾಕ್ಯದಲ್ಲಿ ಬಳಸಿರಿ**

ದರ್ಶನ, ನವಿಲು, ಕೃತಜ್ಞತೆ, ಆಶೀರ್ವಾದ, ರಜೆ, ವಿಶ್ರಾಂತಿ

**ಈ. ಈ ಗದ್ಯಭಾಗದಲ್ಲಿ ಬಂದಿರುವ ದ್ವಿರುಕ್ತಿ ಪದಗಳನ್ನು ಆರಿಸಿ ಬರೆಯಿರಿ:**

ಮಾದರಿ : ನಿಮ್ಮ ನಿಮ್ಮ

**ಉ. ಈ ಗದ್ಯಭಾಗದಲ್ಲಿ ಬಂದಿರುವ ಜೋಡಿಪದಗಳನ್ನು ಆರಿಸಿ ಬರೆಯಿರಿ:**

ಮಾದರಿ : ಮನೆ – ಮಠ

**ಊ. ವಿಭಕ್ತಿ ಪ್ರತ್ಯಯವನ್ನು ಗುರುತಿಸಿ ಹೆಸರಿಸಿ:**

ಶಿಖರವನ್ನು, ಕೋಲುಗಳಿಗೆ, ಹುಡುಗರಲ್ಲಿ, ಸಾಹೇಬರ, ಸೆಳತದಿಂದ.

## ಚಟುವಟಿಕೆ

೧. ನಿಮ್ಮ ಸ್ಥಳೀಯ ಧಾರ್ಮಿಕ ಸ್ಥಳಗಳಿಗೆ ಭೇಟಿ ನೀಡಿ, ಅದರ ವಿಶೇಷತೆಯನ್ನು ಸಂಗ್ರಹಿಸಿ ಬರೆಯಿರಿ.

೨. ನಿಮ್ಮ ಊರಿನಲ್ಲಿ ನಡೆಯುವ ಜಾತ್ರೆ / ಉರ್ಸ್ ಆಚರಣೆಯನ್ನು ವೀಕ್ಷಿಸಿ ಚರ್ಚಿಸಿರಿ.

# ಕ್ರಿಯಾಪದ

ಕ್ರಿಯೆಯನ್ನು ಸೂಚಿಸುವ ಪದವನ್ನು ಕ್ರಿಯಾಪದ ಎನ್ನುತ್ತೇವೆ. ಕ್ರಿಯಾ ಪದವು ಕ್ರಿಯಾಪ್ರಕೃತಿ, ಕಾಲ ಸೂಚಕ ಪ್ರತ್ಯಯ, ಆಖ್ಯಾತ ಪ್ರತ್ಯಯಗಳನ್ನು ಒಳಗೊಂಡಿರುತ್ತದೆ.

**ಧಾತು / ಕ್ರಿಯಾಪ್ರಕೃತಿ:**

ಕ್ರಿಯಾ ಪದದ ಮೂಲರೂಪವನ್ನು ಧಾತು ಅಥವಾ ಕ್ರಿಯಾ ಪ್ರಕೃತಿ ಎನ್ನುತ್ತೇವೆ

**ಕಾಲಸೂಚಕ ಪ್ರತ್ಯಯ:**

ಕಾಲವನ್ನು ಸೂಚಿಸುವ ಪ್ರತ್ಯಯವನ್ನು ಕಾಲ ಸೂಚಕ ಪ್ರತ್ಯಯ ಎನ್ನುತ್ತೇವೆ.

**ಆಖ್ಯಾತ ಪ್ರತ್ಯಯ:**

ಕ್ರಿಯಾ ಪದಗಳಲ್ಲಿ ಲಿಂಗ, ಪುರುಷ ಮತ್ತು ವಚನಗಳನ್ನು ಸೂಚಿಸುವ ಪ್ರತ್ಯಯಗಳಿಗೆ ಅಖ್ಯಾತ ಪ್ರತ್ಯಯ ಎನ್ನುತ್ತೇವೆ.

**ಉದಾಹರಣೆ:**

* ರಾಜಪ್ಪ ಆನೆಯನ್ನು ಸಾಕುತ್ತಾನೆ
* ಮಧು ಇಂಪಾಗಿ ಹಾಡುತ್ತಾಳೆ
* ಇಂದು ಮಳೆ ಬರುತ್ತದೆ

ಈ ಮೇಲಿನ ವಾಕ್ಯಗಳಲ್ಲಿರುವ ಸಾಕುತ್ತಾನೆ, ಹಾಡುತ್ತಾಳೆ, ಬರುತ್ತದೆ ಎಂಬ ಪದಗಳು ಕ್ರಿಯಾಪದಕ್ಕೆ ಉದಾಹರಣೆ.

| ಕ್ರಿಯಾಪದ | ಧಾತು | ಕಾಲಸೂಚಕ ಪ್ರತ್ಯಯ | ಆಖ್ಯಾತ ಪ್ರತ್ಯಯ |
|---|---|---|---|
| ಸಾಕುತ್ತಾನೆ | ಸಾಕು | ಉತ್ತ | ಆನೆ |
| ಹಾಡುತ್ತಾಳೆ | ಹಾಡು | ಉತ್ತ | ಆಳೆ |
| ಬರುತ್ತದೆ | ಬರು | ಉತ್ತ | ದೆ |

**ಧಾತುಗಳ ಬಗೆಗಳು:**

ಧಾತುಗಳಲ್ಲಿ ಎರಡು ಬಗೆಗಳಿವೆ.

ಸಹಜ ಧಾತು / ಮೂಲ ಧಾತು

ಸಾಧಿತ ಧಾತು

**ಸಹಜ ಧಾತು**

ಯಾವ ಧಾತುಗಳು ಪ್ರತ್ಯಯಗಳ ನೆರವಿಲ್ಲದೆ ಸ್ವತಂತ್ರ್ಯವಾಗಿ ಕ್ರಿಯೆಯ ಅರ್ಥ ನೀಡುವವೋ ಅವುಗಳನ್ನು ಸಹಜ ಧಾತು ಅಥವಾ ಮೂಲ ಧಾತು ಎಂದು ಕರೆಯುತ್ತೇವೆ.

ಉದಾಹರಣೆ: ಅಗಿ, ಉಗಿ, ಜಗಿ, ಅರಚು, ಅಡಗು.

**ಸಾಧಿತ ಧಾತು:**

ಧಾತುಗಳಿಗೆ, ನಾಮ ಪ್ರಕೃತಿಗಳಿಗೆ ಮತ್ತು ಅನುಕರಣಾವ್ಯಯಗಳಿಗೆ 'ಇಸು' ಪ್ರತ್ಯಯ ಸೇರಿಸಿದಾಗ ಸಾಧಿತ ಧಾತುಗಳು ಉಂಟಾಗುತ್ತವೆ.

ಉದಾಹರಣೆ :

(ಧಾತು) ಬರೆ + ಇಸು = ಬರೆಯಿಸು

(ನಾಮಪ್ರಕೃತಿ) ಕನ್ನಡ + ಇಸು = ಕನ್ನಡಿಸು

(ಅನುಕರಣಾವ್ಯಯ) ಧಗಧಗ + ಇಸು = ಧಗಧಗಿಸು

## ಸಕರ್ಮಕ – ಅಕರ್ಮಕ

**ಸಕರ್ಮಕ:**

ಕರ್ತೃ ಮತ್ತು ಕ್ರಿಯಾಪದಗಳು ಮತ್ತೊಂದು ಪದವನ್ನು ಅಪೇಕ್ಷಿಸಿದರೆ ಅಂತಹ ಕ್ರಿಯಾ ಪದವನ್ನು ಸಕರ್ಮಕ ಕ್ರಿಯಾಪದ ಎನ್ನುವರು.

ಉದಾ: * ಕೋತಿ ತಿಂದಿತು.

* ಕತ್ತೆ ಒದೆಯಿತು

ಮೇಲಿನ ಎರಡು ವಾಕ್ಯಗಳೂ ಇನ್ನೂ ಒಂದು ಪದವನ್ನು ಅಪೇಕ್ಷಿಸುತ್ತವೆ.

ಕೋತಿ ಏನನ್ನು ತಿಂದಿತು?

ಕತ್ತೆ ಏನನ್ನು ಒದೆಯಿತು?

ಎಂಬ ಪ್ರಶ್ನೆಗಳನ್ನು ಹಾಕಿದಾಗ

– ಕೋತಿ ಹಣ್ಣನ್ನು ತಿಂದಿತು.

– ಕತ್ತೆ ಮಡಕೆಯನ್ನು ಒದೆಯಿತು.

ಎಂಬ ಉತ್ತರಗಳು ಹೊರಬರುತ್ತವೆ. ಆದ್ದರಿಂದ ತಿಂದಿತು ಮತ್ತು ಒದೆಯಿತು ಈ ಕ್ರಿಯಾಪದಗಳು ಸಕರ್ಮಕ ಕ್ರಿಯಾಪದಗಳು.

**ಅಕರ್ಮಕ:**

ಕರ್ತೃ ಮತ್ತು ಕ್ರಿಯಾ ಪದಗಳು ಮತ್ತೊಂದು ಪದವನ್ನು ಅಪೇಕ್ಷಿಸದೇ ಸಂಪೂರ್ಣ ಅರ್ಥ ನೀಡುವ ಕ್ರಿಯಾ ಪದಗಳನ್ನು ಅಕರ್ಮಕ ಕ್ರಿಯಾ ಪದಗಳೆನ್ನುವರು.

ಉದಾ: * ಕನ್ನಡಿ ಒಡೆಯಿತು.

* ರೆಂಬೆ ಮುರಿಯಿತು.

ಮೇಲಿನ ವಾಕ್ಯಗಳಲ್ಲಿ ಒಡೆಯಿತು ಮತ್ತು ಮುರಿಯಿತು ಎಂಬ ಪದಗಳು ಅಕರ್ಮಕ ಕ್ರಿಯಾಪದಗಳಾಗಿವೆ.

## ಕಾಲಗಳು

ಕ್ರಿಯಾಪದಗಳಿಗೆ ಅಖ್ಯಾತ ಪ್ರತ್ಯಯವು ಯಾವಕಾಲದಲ್ಲಿ ಸೇರಿರುತ್ತದೆಯೋ ಆ ಕಾಲದ ಕ್ರಿಯಾಪದಗಳು ಆಗುತ್ತವೆ. ಕಾಲಗಳು ಮೂರು

**೧. ವರ್ತಮಾನ ಕಾಲ**

ಕ್ರಿಯಾ ಪ್ರಕೃತಿಗಳಿಗೆ ವರ್ತಮಾನ ಕಾಲದಲ್ಲಿ ಅಖ್ಯಾತ ಪ್ರತ್ಯಯಗಳು ಸೇರುವುದರಿಂದ ವರ್ತಮಾನ ಕಾಲದ ಕ್ರಿಯಾ ಪದಗಳಾಗುತ್ತವೆ.

ವರ್ತಮಾನ ಕಾಲವು ಕ್ರಿಯೆಯು ನಡೆಯುತ್ತಿರುವುದನ್ನು ಸೂಚಿಸುತ್ತದೆ. ಅಂದರೆ ಈ ಕ್ಷಣ, ದಿನವನ್ನು ವರ್ತಮಾನ ಕಾಲವೆನ್ನುತ್ತೇವೆ. ಪ್ರಸ್ತುತ ಕಾಲದಲ್ಲಿ ನಡೆದರೆ ಅದು ವರ್ತಮಾನಕಾಲದ್ದಾಗಿದೆ ಎಂದೂ ಹೇಳಬಹುದು.

ಇಲ್ಲಿ 'ನೋಡು' ಎಂಬ ಕ್ರಿಯಾ ಪ್ರಕೃತಿಯು ವರ್ತಮಾನಕಾಲದಲ್ಲಿ ವಿವಿಧ ಪ್ರಕಾರದ ಕ್ರಿಯಾ ಪದಗಳಾಗುವ ಬಗೆಯನ್ನು ಗಮನಿಸಿ.

| **ಕ್ರಿಯಾಪ್ರಕೃತಿ** | **+ ಕಾಲಸೂಚಕ ಪ್ರತ್ಯಯ** | **+ ಅಖ್ಯಾತ ಪ್ರತ್ಯಯ** | **= ಕ್ರಿಯಾಪದ** |
|---|---|---|---|
| **೧. ಪ್ರಥಮ ಪುರುಷ** | | | |
| ಅ. ಪುಲ್ಲಿಂಗ | ನೋಡು + ಉತ್ತ | + ಆನೆ | = ನೋಡುತ್ತಾನೆ |
| ಆ. ಸ್ತ್ರೀಲಿಂಗ | ನೋಡು+ ಉತ್ತ | + ಆಳೆ | = ನೊಡುತ್ತಾಳೆ |
| ಇ. ನಪುಂಸಕಲಿಂಗ | ನೋಡು + ಉತ್ತ | + ಅದೆ | = ನೋಡುತ್ತದೆ. |
| **೨. ಮಧ್ಯಮ ಪುರುಷ** | ನೋಡು + ಉತ್ತ | + ಈಯೆ | = ನೋಡುತ್ತೀಯೆ |
| **೩. ಉತ್ತಮ ಪುರುಷ** | ನೋಡು + ಉತ್ತ | + ಏನೆ | = ನೋಡುತ್ತೇನೆ |

**೨. ಭೂತಕಾಲ**

ಕ್ರಿಯಾ ಪ್ರಕೃತಿಗಳಿಗೆ ಭೂತಕಾಲದ ಅಖ್ಯಾತ ಪ್ರತ್ಯಯಗಳು ಸೇರುವುದರಿಮದ ಭೂತ ಕಾಲದ ಕ್ರಿಯಾಪಗಳೆನಿಸುತ್ತವೆ.



ಭೂತಕಾಲವು ಈ ಹಿಂದೆ ನಡೆದು ಹೋದ ಕ್ರಿಯೆಯನ್ನು ವಿವರಿಸುವ ಕಾಲವಾಗಿದೆ. ಅಂದರೆ ಈ ಕ್ಷಣಕ್ಕೆ ಆ ಕ್ರಿಯೆಯು ಮುಗಿದು ಹೋಗಿರುತ್ತದೆ. ಪ್ರಸ್ತುತ ಕಾಲಕ್ಕಿಂತ ಹಿಂದೆ ಕ್ರಿಯೆಯು ನಡೆದರೆ ಅದು ಭೂತಕಾಲವೆನಿಸುತ್ತದೆ.

ಈಗ 'ನೋಡು' ಎಂಬ ಕ್ರಿಯಾ ಪ್ರಕೃತಿಯು ಭೂತಕಾಲದಲ್ಲಿ ವಿವಿಧ ಪ್ರಕಾರದ ಕ್ರಿಯಾ ಪದಗಳಾಗುವ ಬಗೆಯನ್ನು ಗಮನಿಸಿರಿ.

| **ಕ್ರಿಯಾಪ್ರಕೃತಿ** | **+ ಕಾಲಸೂಚಕ ಪ್ರತ್ಯಯ** | **+ಅಖ್ಯಾತ ಪ್ರತ್ಯಯ** | **= ಕ್ರಿಯಾಪದ** |
|---|---|---|---|
| **೧. ಪ್ರಥಮ ಪರುಷ** | | | |
| ಅ. ಪುಲ್ಲಿಂಗ | ನೋಡು + ದ | + ಅನು | = ನೋಡಿದನು |
| ಆ. ಸ್ತ್ರೀಲಿಂಗ | ನೋಡು + ದ | + ಅಳು | = ನೋಡಿದಳು |
| ಇ. ನಪುಂಸಕಲಿಂಗ | ನೋಡು + ದ | + ಇತು | = ನೋಡಿತು |
| **೨. ಮಧ್ಯಮ ಪುರುಷ** | ನೋಡು + ದ | + ಎ | = ನೋಡಿದೆ |
| **೩. ಉತ್ತಮ ಪುರುಷ** | ನೋಡು + ದ | + ಎನು | = ನೋಡಿದೆನು |

**೩. ಭವಿಷ್ಯತ್ ಕಾಲ:**

ಕ್ರಿಯಾ ಪ್ರಕೃತಿಗಳಿಗೆ ಭವಿಷ್ಯತ್ ಕಾಲದಲ್ಲಿ ಆಖ್ಯಾತ ಪ್ರತ್ಯಯಗಳು ಸೇರುವುದರಿಂದ ಭವಿಷ್ಯತ್ ಕಾಲದ ಕ್ರಿಯಾಪದಗಳೆನಿಸುತ್ತವೆ.

ಭವಿಷ್ಯತ್ ಕಾಲವು ಇನ್ನು ಮುಂದೆ ನಡೆಯುವ ಕ್ರಿಯೆಯನ್ನು ವಿವರಿಸುವ ಕಾಲವಾಗಿದೆ. ಅಂದರೆ ಕ್ರಿಯೆ ಈ ಕ್ಷಣದ ಮುಂದೆ ಜರುಗಲಿದೆ ಎಂದು ಅರ್ಥ. ಪ್ರಸ್ತುತ ಕಾಲಕ್ಕಿಂತ ಮುಂದೆ ಕ್ರಿಯೆಯು ನಡೆದರೆ ಅದು ಭವಿಷ್ಯತ್ ಕಾಲವೆನಿಸುತ್ತದೆ.

ಉದಾಹರಣೆಯನ್ನು ಗಮನಿಸಿ.

"ರಾಮನು ಶಾಲೆಗೆ ಹೋಗುವನು"

ಇಲ್ಲಿ ರಾಮನು ಶಾಲೆಗೆ ಹೋಗುವ ಕ್ರಿಯೆಯು ಭವಿಷ್ಯತ್ ಕಾಲದಲ್ಲಿ ನಡೆಯುವುದು ಅರ್ಥವಾಗುತ್ತದೆ. (ಹೋಗುವನು ಎಂದರೆ ಈ ಕ್ಷಣದ ಮುಂದೆ ಹೊಗುವನು ಎಂದು ಅರ್ಥ) ಈ ಭವಿಷ್ಯತ್ ಕಾಲದ ಕ್ರಿಯಾಪದಗಳು ಹೇಗೆ ಆಗುತ್ತವೆ ಎಂಬುದನ್ನು ಗಮನಿಸಿ.

ಉದಾಹರಣೆಗೆ : ನೊಡು + ವ + ಅನು = ನೋಡುವನು.

ಈ ಉದಾಹರಣೆಯಲ್ಲಿ ನೋಡು ಎಂಬ ಕ್ರಿಯಾ ಪ್ರಕೃತಿಗೆ 'ಅನು' ಎಂಬ ಆಖ್ಯಾತ ಪ್ರತ್ಯಯವು ಸೇರುವಾಗ 'ವ' ಎಂಬ ಕಾಲಸೂಚಕ ಪ್ರತ್ಯಯ ಆಗಮವಾಗಿದೆ. ಹೀಗೆ ಪ್ರತಿಯೊಂದು ಕ್ರಿಯಾ ಪ್ರಕೃತಿಗೂ ಈ ಪ್ರಕಾರ ಆಖ್ಯಾತ ಪ್ರತ್ಯಯಗಳು ಸೇರಿದಾಗ ಅವು ಭವಿಷ್ಯತ್ ಕಾಲದ ಕ್ರಿಯಾ ಪದಗಳೆನಿಸುತ್ತವೆ.

ಈಗ 'ನೋಡು' ಎಂಬ ಕ್ರಿಯಾ ಪ್ರಕೃತಿಯು ಭವಿಷ್ಯತ್ ಕಾಲದಲ್ಲಿ ವಿವಿಧ ಪ್ರಕಾರದ ಕ್ರಿಯಾ ಪದಗಳಾಗುವ ಬಗೆಯನ್ನು ಗಮನಿಸಿರಿ.

| **ಕ್ರಿಯಾಪ್ರಕೃತಿ** | **+ ಕಾಲಸೂಚಕ ಪ್ರತ್ಯಯ** | **+ ಅಖ್ಯಾತ ಪ್ರತ್ಯಯ** | **= ಕ್ರಿಯಾಪದ** |
|---|---|---|---|
| **೧. ಪ್ರಥಮ ಪುರುಷ** | | | |
| ಅ. ಪುಲ್ಲಿಂಗ | ನೋಡು + ವ | + ಅನು | = ನೋಡುವನು |
| ಆ. ಸ್ತ್ರೀಲಿಂಗ | ನೋಡು + ವ | + ಅಳು | = ನೋಡುವಳು |
| ಇ. ನಪುಂಸಕಲಿಂಗ | ನೋಡು + ವ | + ಅದು | = ನೋಡುವುದು |
| **೨. ಮಧ್ಯಮ ಪುರುಷ** | ನೋಡು + ವ | + ಇ | = ನೋಡುವಿ |
| **೩. ಉತ್ತಮ ಪುರುಷ** | ನೋಡು + ವ | + ಎನು | = ನೋಡುವೆನು |

ಹೀಗೆ ಕನ್ನಡ ವ್ಯಾಕರಣದಲ್ಲಿ 'ಕಾಲ'ವನ್ನು ಮೂರು ಬಗೆಗಳಲ್ಲಿ ಗುರುತಿಸಲಾಗಿದೆ.

**ಕಾಲ ಪಲ್ಲಟ:** ವಾಕ್ಯದಲ್ಲಿ ಒಂದು ನಿರ್ದಿಷ್ಟ ಕಾಲದ ಪ್ರಯೋಗವು ಮತ್ತೊಂದು ಕಾಲದ ಅರ್ಥವನ್ನು ಸೂಚಿಸುವುದೇ ಕಾಲಪಲ್ಲಟ.,

ಉದಾ: ನಮ್ಮಣ್ಣನು ನಾಳೆ ಬರುತ್ತಾನೆ– ಈ ವಾಕ್ಯ ವರ್ತಮಾನ ಕಾಲದ ಪ್ರಯೋಗದಲ್ಲಿದೆ. ಆದರೆ ಭವಿಷ್ಯತ್ ಕಾಲದ ಅರ್ಥ ಹೊರಹೊಮ್ಮಿಸುತ್ತದೆ.

# ೯. ಮನೆಗೆಲಸದ ಹೆಣ್ಣುಮಗಳು

– ಎಸ್. ಜಿ. ಸಿದ್ಧರಾಮಯ್ಯ

**ಪ್ರವೇಶ ಮತ್ತು ಆಶಯ**

ಕುಡಿತಕ್ಕೆ ಬಲಿಯಾದ ವ್ಯಕ್ತಿಯೊಬ್ಬನು ಕುಟುಂಬದ ಸರ್ವನಾಶಕ್ಕೆ ಕಾರಣನಾಗುತ್ತಾನೆ. ಅವನ ಜೀವನವೆಲ್ಲ ಹಾಳಾಗುವುದು. ಅಲ್ಲದೆ ಅವನ ಮಕ್ಕಳು ಮೊಮ್ಮಕ್ಕಳು ಜೀತ (ಸೇವೆ) ಮಾಡಿಕೊಂಡು, ಸಾಲ ಮಾಡಿಕೊಂಡು ಸಾಲದಲ್ಲಿ ಹುಟ್ಟಿ ಸಾಲದಲ್ಲಿಯೇ ಸಾಯುವರು. ಕುಡಿತದ ಆಸೆಯನ್ನು ಪೂರೈಸಲು ಹೆಣ್ಣುಮಗಳನ್ನು ಕೆಲಸಕ್ಕಿಡುವನು. ಕುಡಿತದ ದುಶ್ಚಟಕ್ಕೆ ಬಿದ್ದ ವ್ಯಕ್ತಿಯೊಬ್ಬನ ಮಗಳ ದುಸ್ಥಿತಿಯ ಚಿತ್ರಣ ಈ ಕವನದ ವಸ್ತು.

ಮನೆಗೆಲಸದ ಹೆಣ್ಣು ಮಗಳು ಸಮಾಜದ ಅವ್ಯವಸ್ಥೆಗೆ ಮೂಕಳಾಗಿ, ಅಸಹಾಯಕಳಾಗಿ ಪ್ರತಿಕ್ರಿಯಿಸುತ್ತಿದ್ದಾಳೆ. ಪ್ರತಿಯೊಬ್ಬರೂ ತಮ್ಮ ಹಕ್ಕನ್ನು ಪಡೆದು ಶಿಕ್ಷಿತರಾಗಬೇಕೆಂಬುದನ್ನು ತಿಳಿಸುವುದು ಕವನದ ಆಶಯ.





ಕುಡುಕ ಅಪ್ಪ ಸಾಲ ಮಾಡಿ
ನನ್ನ ಜೀತಕಿಟ್ಟನು
ಪಟ್ಟಣಕ್ಕೆ ಕರೆತಂದು
ಮನೆಕೆಲಸಕ್ಕೆ ಬಿಟ್ಟನು

ಕಸಮುಸುರೆ ತೊಳೆಯುತೀನಿ
ಬಟ್ಟೆ ಬರೆ ಒಗೆಯುತೀನಿ
ನೀರೊಳಾಡಿ ಕೈಯಿಸೆಲೆತು
ಕಾಲುಹುಣ್ಣು ಮೈಯಿ ನೋವು

ಯೂನಿಫಾರಂ ಹುಡುಗನನ್ನು
ಶಾಲೆಗೆಂದು ಬಿಡುತೀನಿ
ಶಾಲೆ ಮಕ್ಕಳನ್ನು ನೋಡಿ
ಮೂಕಳಾಗಿ ನಿಲ್ಲುತೀನಿ

ಅವರಂತೆ ನಾನಿಲ್ಲ
ಅವರ ನಗುವು ನನ್ನಲಿಲ್ಲ
ಆ ಪುಸ್ತಕ ಆ ಸ್ಲೇಟು
ಯಾಕೆ ನನಗೆ ಸಿಕ್ಕಲಿಲ್ಲ
ಹೆಣ್ಣೊಂದು ಕಲಿತರೆ
ಶಾಲೆಯೊಂದು ತೆರೆದಂತೆ.

ಮನೆಯೆ ಮೊದಲ ಪಾಠಶಾಲೆ
ತಾಯಿ ಮೊದಲ ಗುರುವು
ಮಕ್ಕಳೇ ದೇವರೆಂದು
ಹೇಳುತಾರೆ ದೊಡ್ಡವರು
ನಾವು ಮಕ್ಕಳಲ್ಲವೇ
ನಮಗೆ ಹಕ್ಕು ಇಲ್ಲವೇ?



**ಕವಿ ಕಾವ್ಯ ಪರಿಚಯ:**



ಎಸ್.ಜಿ.ಸಿದ್ಧರಾಮಯ್ಯನವರು ೧೯.೧೧.೧೯೪೬ ರಲ್ಲಿ ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ತಾಲೂಕಿನಲ್ಲಿ ಹುಟ್ಟಿದರು. ಸಿಂಗಾಪುರ, ಶ್ರೀರಾಮಪುರ, ತುಮಕೂರು, ಬೆಂಗಳೂರಿನಲ್ಲಿ ವಿದ್ಯಾಭ್ಯಾಸ. ಕನ್ನಡ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಪ್ರಿನ್ಸಿಪಾಲರಾಗಿ, ಸೇವೆ ಸಲ್ಲಿಸಿ, ನಿವೃತ್ತರಾಗಿದ್ದಾರೆ. ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷ ಸ್ಥಾನದ ಸಮರ್ಥ ನಿರ್ವಹಣೆ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯೂ ಸೇರಿದಂತೆ ಹಲವು ಪ್ರಶಸ್ತಿ, ಗೌರವಗಳು ಸಂದಿವೆ.

'ಗಾಳ್ಪ ಉಬ್ಬಿನ ಮೇಲೆ, ಕಾಡುವ ಬೇಲಿ ಹೂ, ಅವಳೆದೆಯ ಜಂಗಮ, ಸೊಲ್ಲು ಫಲವಾಗಿ, ಮರು ಜೇವಣಿ, ಕರೆಬಳೆಗ, ಬೀದಿ ಅಲ್ಲಮ, ಕಾಯ ಮಾಯದ ಹಾಡು, ಮುಂತಾದ ಕೃತಿಗಳನ್ನು ರಚಿಸಿದ್ದಾರೆ.

ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಪು.ತಿ.ನ.ಕಾವ್ಯ ಪ್ರಶಸ್ತಿ, ಜಿ.ಎಸ್.ಎಸ್. ಕಾವ್ಯ ಪ್ರಶಸ್ತಿ, ಮುಂತಾದ ಪ್ರಶಸ್ತಿಗಳು ದೊರಕಿದೆ.

ಪ್ರಸ್ತುತ ಕವನವನ್ನು "ಉರಿವ ಬತ್ತಿ ತೈಲ" ಕವನ ಸಂಕಲನದಿಂದ ಆರಿಸಲಾಗಿದೆ.

ಓದಿ ತಿಳಿಯಿರಿ:

ಯೂನಿಫಾರಂ = ಸಮವಸ್ತ್ರ

ಹಕ್ಕು = ಒಡೆತನ, ಅಧಿಕಾರ, ಸ್ವಾಮ್ಯ

## ಅಭ್ಯಾಸ

**ಅ. ಒಂದು ವಾಕ್ಯದಲ್ಲಿ ಉತ್ತರಿಸಿರಿ**

೧. ಕುಡುಕ ಅಪ್ಪ ಏನು ಮಾಡಿ ಜೀತಕ್ಕಿಟ್ಟನು?

೨. ಕುಡುಕ ಅಪ್ಪ ಮಗಳನ್ನು ಪಟ್ಟಣಕ್ಕೆ ಏಕೆ ಕರೆತಂದನು?

೩. ನಮಗೆ ಮೊದಲ ಗುರು ಯಾರು?

೪. ಹೆಣ್ಣೊಂದು ಕಲಿತರೆ ಏನನ್ನು ತೆರೆದಂತೆ?

೫. ಹೆಣ್ಣು ಮಗಳು ಏನನ್ನು ನೋಡಿ ಮೂಕಳಾಗುತ್ತಾಳೆ?

**ಆ. ಎರಡು / ಮೂರು ವಾಕ್ಯಗಳಲ್ಲಿ ಉತ್ತರಿಸಿರಿ:**

೧. ಕಡುಕ ಅಪ್ಪ ಮಾಡಿದ ತಪ್ಪುಗಳಾವುವು?

೨. ಮನೆಗೆಲಸದ ಹೆಣ್ಣು ಮಗಳು ಮಾಡುವ ಕೆಲಸಗಳಾವುವು?

೩. ಮನೆಗೆಲಸದ ಹೆಣ್ಣು ಮಗಳಲ್ಲಿ ಶಾಲೆ ನೋಡಿ ಮೂಡಿದ ಆಸೆ ಏನು?

**ಇ. ಈ ವಾಕ್ಯಗಳನ್ನು ಸಂದರ್ಭದೊಡನೆ ವಿವರಿಸಿರಿ:**

೧. ಅವರಂತೆ ನಾನಿಲ್ಲ

೨. ಶಾಲೆಯೊಂದು ತೆರೆದಂತೆ

೩. ನಮಗೆ ಹಕ್ಕು ಇಲ್ಲವೇ?



### ಭಾಷಾಭ್ಯಾಸ

**ಅ. ಕೆಳಗಿನ ಶಬ್ದಗಳನ್ನು ಬಿಡಿಸಿ ಸಂಧಿ ಹೆಸರಿಸಿರಿ:**

ಮನೆಗೆಲಸ, ಶಾಲೆಯೊಂದು, ದೇವರೆಂದು, ನಾನಿಲ್ಲ

**ಆ. ಬಿಟ್ಟ ಸ್ಥಳ ತುಂಬಿರಿ:**

೧. ಕುಡುಕ ಅಪ್ಪ ನನ್ನ ________

೨. ________ ನೋಡಿ ಮೂಕಳಾಗಿ ನಿಲ್ಲುತೀನಿ.

೩. ಅವರ ________ ನನ್ನಲಿಲ್ಲ.

೪. ಮಕ್ಕಳೇ ________ ಎಂದು ಹೇಳುತ್ತಾರೆ.

೫. ನಮಗೇ ________ ಇಲ್ಲವೇ.

೬. ಮನೆಯೆ ________ ಪಾಠಶಾಲೆ.

ಇ. **ಹೊಂದಿಸಿ ಬರೆಯಿರಿ:**

| | | |
|---|---|---|
| ೧. | ಕಸಮುಸುರೆ | ಒಗೆಯುತೀನಿ |
| ೨. | ಬಟ್ಟೆ ಬರೆ | ತೊಳೆಯುತೀನಿ |
| ೩. | ಯೂನಿಫಾರಂ | ಗುಲಾಮಗಿರಿ |
| ೪. | ಜೀತ ಪದ್ಧತಿ | ಶಾಲೆ |
| | | ಕುಡುಕ ಅಪ್ಪ |

ಈ. **ಸಂಸ್ಕೃತ – ತದ್ಭವಗಳನ್ನು ಬರೆಯಿರಿ:**

ಶಾಲಾ, ಪುಸ್ತಕ ಮೂಗ, ಸಂತೆ

ಉ. **ವಿಭಕ್ತಿ ಪ್ರತ್ಯಯಗಳನ್ನು ಗುರುತಿಸಿ ಹೆಸರಿಸಿರಿ:**

ಮಕ್ಕಳನ್ನು, ನನಗೆ, ಅವರಿಂದ, ಪುಸ್ತಕದ

ಊ. **ವಿರುದ್ಧಾರ್ಥಕ ಪದವನ್ನು ಬರೆಯಿರಿ**

ನಗು, ಮೊದಲು

**ಚಟುವಟಿಕೆ**

೧. ಬಾಲಕಾರ್ಮಿಕರ ಬವಣೆಯನ್ನು ಕುರಿತು ಬರೆಯಿರಿ.

೨. ನಿಮ್ಮ ಸುತ್ತಲಿನ ಹೆಣ್ಣು ಮಕ್ಕಳ ಕರುಣಾಜನಕ ಮಾಹಿತಿ ಸಂಗ್ರಹಿಸಿರಿ.

೩. ಪದ್ಯದಲ್ಲಿ ಬಂದಿರುವ ಅನ್ಯದೇಶೀಯ ಪದಗಳನ್ನು ಪಟ್ಟಿ ಮಾಡಿರಿ.

# ೧೦. ಮಹಾತ್ಮಗಾಂಧಿ ರಸ್ತೆಯ ಹಾಸ್ಟೆಲ್

**– ಸಿದ್ಧಲಿಂಗಯ್ಯ**

**ಪ್ರವೇಶ ಮತ್ತು ಆಶಯ :**

ಬಡತನ ಸಾಮಾಜಿಕ ಸಮಸ್ಯೆಗಳಲ್ಲಿ ಒಂದು. ಬಡತನದ ಪರಿಸರದಲ್ಲಿ ಹುಟ್ಟಿ ಇದರ ಬೇಗೆಯಲ್ಲಿ ಬೆಂದು ಸಮಾಜದಲ್ಲಿ ಹೋರಾಟ ಮಾಡಿಕೊಂಡು ಬಂದ ಮಹನೀಯರು ಅದೆಷ್ಟೋ ಮಂದಿ ನಮ್ಮ ನಡುವೆ ಕಾಣಸಿಗುತ್ತಾರೆ. ಬಡತನದಲ್ಲಿ ಹುಟ್ಟಿ ಬೆಳೆದು ತಮ್ಮ ಛಲ ಆತ್ಮವಿಶ್ವಾಸದಿಂದ ಜೀವನದಲ್ಲಿ ಮೇಲೇರಿ ಬಂದ ಡಾ. ಸಿದ್ಧಲಿಂಗಯ್ಯನವರು ಅಂತಹವರಲ್ಲಿ ಒಬ್ಬರು. ಅಂದಿನ ಸಾಮಾಜಿಕ ಸ್ಥಿತಿಗತಿಗಳನ್ನು ಈ ಭಾಗ ಪರಿಚಯ ಮಾಡಿಕೊಡುತ್ತದೆ. ಅವರ ಜೀವನದ ಒಂದು ಘಟನೆ ಇಲ್ಲಿದೆ.

ನಾನು ಸರ್ಕಾರಿ ಆರ್ಟ್ಸ್ ಕಾಲೇಜಿಗೆ ಸೇರಿದೆ. ಮಹಾತ್ಮಗಾಂಧಿ ರಸ್ತೆಯಲ್ಲಿರುವ ದಲಿತ ವಿದ್ಯಾರ್ಥಿ ನಿಲಯದಲ್ಲಿ ಸೀಟು ಸಿಕ್ಕಿತು. ನನ್ನ ಬಳಿ ಒಂದು ಮುರುಕಲು ಟ್ರಂಕು ಮತ್ತು ಹರುಕಲು ಚಾಪೆ ಇತ್ತು. ಇವನ್ನು ಮನೆಯಿಂದ ಹೊತ್ತುಕೊಂಡು ಕಾಲ್ನಡಿಗೆಯಲ್ಲಿ ವಿದ್ಯಾರ್ಥಿನಿಲಯ ತಲುಪಬೇಕಾಗಿತ್ತು. ಹಗಲು ಹೊತ್ತಿನಲ್ಲಿ ನನ್ನ ಬಡತನದ ಪ್ರದರ್ಶನ ಮಾಡುವುದು ಇಷ್ಟವಿರಲಿಲ್ಲ. ಆದ್ದರಿಂದ ಬೆಳಗಿನ ಜಾವ ಮೂರುವರೆ ಗಂಟೆಗೆ ಎದ್ದು ಟ್ರಂಕನ್ನು ತಲೆಯ ಮೇಲೆ ಹೊತ್ತುಕೊಂಡು ಚಾಪೆಯನ್ನು ಕೈಯಲ್ಲಿ ಹಿಡಿದು ಶ್ರೀರಾಮಪುರದಿಂದ ಮಹಾತ್ಮಗಾಂಧಿ ರಸ್ತೆಯ ಅಂಚಿಗೆ ಪ್ರಯಾಣ ಮಾಡಿದೆ.

ಕಬ್ಬನ್‌ಪಾರ್ಕ್ ದಾಟುವಾಗ ಬೆಳದಿಂಗಳು ಮರಗಿಡಗಳ ಮೇಲೆ ಬಿದ್ದ ದೃಶ್ಯ ಮನೋಹರವಾಗಿತ್ತು. ಹಾಸ್ಟೆಲ್‌ನಲ್ಲಿ ಊಟದ ವ್ಯವಸ್ಥೆ ಬಹಳ ಚೆನ್ನಾಗಿತ್ತು. ದಿನವೂ ಅನ್ನ, ಚಪಾತಿ ಕೊಡುತ್ತಿದ್ದರು. ವಾರಕ್ಕೆ ಎರಡು ಸಲ ಮಾಂಸಾಹಾರವಿರುತ್ತಿತ್ತು. ಇದರಿಂದ ಪುಳಕಿತನಾಗಿ ಚೆನ್ನಾಗಿ ಊಟ ಮಾಡಲು ಪ್ರಾರಂಭಿಸಿದೆ. ಹತ್ತು ಹದಿನೈದು ದಿನಗಳಲ್ಲಿ ಊಟದ ಪರಿಣಾಮದಿಂದ ನನ್ನ ದೈಹಿಕ ಚಹರೆಯೇ ಬದಲಾಯಿತು. ಭಾನುವಾರ ಮನೆಗೆ ಹೋದಾಗ ನನ್ನನ್ನು ನೋಡಿ ಎಲ್ಲರೂ ಸಂತೋಷಪಟ್ಟರು. ಅನ್ನ ಮಾಂಸದ ಸಾರನ್ನು ಅಡುಗೆ ಮಾಡುತ್ತಿದ್ದ ನಾಯರ್ ಬಡಿಸುತ್ತಿದ್ದರೆ ನನ್ನಲ್ಲಿ ಬೇಡ, ಸಾಕು ಎಂಬ ಮಾತುಗಳೇ ಇರುತ್ತಿರಲಿಲ್ಲ. ಬಡಿಸುವಾಗ ಉದ್ದೇಶಪೂರ್ವಕವಾಗಿ ನನ್ನ ಮುಖವನ್ನು ಬೇರೆಡೆಗೆ ತಿರುಗಿಸಿ ಏನನ್ನೋ ನೋಡುವವನಂತೆ ನಟಿಸುತ್ತಿದ್ದೆ. ತಟ್ಟೆ ತುಂಬಿದ ನಂತರ ಊಟವನ್ನು ನೋಡುತ್ತಿದ್ದೆ. ನಾನು ಉಣ್ಣುವುದನ್ನು ಕಂಡು ಅಸೂಯೆ ಪಟ್ಟವರೂ ಉಂಟು.

ಹೀಗೆ ಊಟ ಮಾಡಿ ಸುಖವಾಗಿ ಕಾಲ ಕಳೆಯುವಾಗ ಹಿರಿಯ ವಿದ್ಯಾರ್ಥಿಯೊಬ್ಬ ನನ್ನನ್ನು ತನ್ನ ರೂಮಿಗೆ ಕರೆದ. ಸೌಜನ್ಯದಿಂದ ನಾನು ಹೋದೆ. ಅವನು ನನ್ನ ಕಣ್ಣನ್ನು ಪರೀಕ್ಷಿಸಿದವನಂತೆ ಮಾಡಿ ನಿನಗೆ ಜಾಂಡೀಸ್ ಖಾಯಿಲೆ ಇದೆ ಎಂದು ಘೋಷಿಸಿದ. ಇದರಿಂದ ಭಯಗೊಂಡ ನಾನು ಅವರಿವರನ್ನು ಈ ಬಗ್ಗೆ ವಿಚಾರಿಸಿದೆ. ಅವರು ಆ ಹಿರಿಯ ವಿದ್ಯಾರ್ಥಿ ನಾಟಿ ವೈದ್ಯನೆಂದೂ, ಅವನ ಮಾತನ್ನ ಕಡೆಗಣಿಸುವಂತಿಲ್ಲವೆಂದೂ ಹೇಳಿದರು. ನಾನು ಬೌರಿಂಗ್ ಆಸ್ಪತ್ರೆಗೆ ಹೋಗಿ ತೋರಿಸಿದೆ. ಅಲ್ಲಿನ ವೈದ್ಯರು ನನ್ನನ್ನು ಪರೀಕ್ಷಿಸಿ ಜಾಂಡೀಸ್ ಇಲ್ಲವೆಂದು ಹೇಳಿದರು. ನಾನು ವಿದ್ಯಾರ್ಥಿ ನಿಲಯದಲ್ಲಿ ಚೆನ್ನಾಗಿ ಊಟ ಮಾಡುವುದನ್ನು ಮತ್ತೆ ಪ್ರಾರಂಭಿಸಿದೆ.



ಕಾಲೇಜಿನಿಂದ ಹಾಸ್ಟೆಲಿಗೆ ಹೋಗುವ ದಾರಿಯಲ್ಲಿ ಕಬ್ಬನ್ ಪಾರ್ಕ್‌ನಲ್ಲಿರುವ ರಾಜ್ಯ ಕೇಂದ್ರ ಗ್ರಂಥಾಲಯಕ್ಕೆ ನಿತ್ಯವೂ ಹೋಗಿ ಸಿಕ್ಕ ಪುಸ್ತಕಗಳನ್ನು ಓದತೊಡಗಿದೆ. ಈ ಅವಧಿಯಲ್ಲಿ ಗ್ರಂಥಾಲಯದ ಪ್ರಯೋಜನವನ್ನು ಬಹಳ ಪಡೆದುಕೊಂಡೆ.

**ಲೇಖಕರ ಪರಿಚಯ:**



ಆಧುನಿಕ ಕನ್ನಡ ಸಾಹಿತ್ಯ ಕ್ಷೇತ್ರದ ಮಹತ್ವದ ಲೇಖಕರಲ್ಲಿ ಸಿದ್ಧಲಿಂಗಯ್ಯನವರು ಪ್ರಮುಖರು. ೦೩.೦೨.೧೯೫೪ರಲ್ಲಿ ಮಂಚೇನಹಳ್ಳಿಯಲ್ಲಿ ಜನಿಸಿದ ಸಿದ್ಧಲಿಂಗಯ್ಯನವರು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಸಿದ್ಧಲಿಂಗಯ್ಯನವರು ದಲಿತರ ಮೇಲೆ ನಡೆಯುವ ಶೋಷಣೆಯನ್ನು ಖಂಡಿಸುತ್ತಾ ದಲಿತರ ಧ್ವನಿಯಾದವರು. ಹೊಲೆಮಾದಿಗರ ಹಾಡು, ಸಾವಿರಾರು ನದಿಗಳು, ಅವರ ಪ್ರಸಿದ್ಧ ಕವನ ಸಂಕಲನಗಳು. ಅವತಾರಗಳು ಎಂಬ ಕೃತಿಯನ್ನೂ ಹೊರತಂದಿದ್ದಾರೆ. ನಾಟಕಗಳಾದ ಪಂಚಮ, ನೆಲಸಮ, ಏಕಲವ್ಯ ಕೃತಿಗಳನ್ನೂ ಬರೆದಿದ್ದಾರೆ.

ಇವರು ಹಕ್ಕಿನೋಟ, ರಸಗಳಿಗೆಗಳು, ಎಂಬ ಕೃತಿಗಳನ್ನು ಪ್ರಕಟಿಸಿದ್ದಾರೆ. ಇವರ ಗ್ರಾಮದೇವತೆಗಳು ಎಂಬ ಪ್ರೌಢ ಪ್ರಬಂಧಕ್ಕೆ ಡಾಕ್ಟರೇಟ್ ಪದವಿ ದೊರೆತಿದೆ. ಹೀಗೆ ಜಾನಪದ, ಸಂಶೋಧನೆ, ವಿಚಾರ ವಿಮರ್ಶೆ, ಮೊದಲಾದ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಇವರು ಕನ್ನಡದ ಶ್ರೇಷ್ಠ ಬರಹಗಾರರಲ್ಲಿ ಒಬ್ಬರು. "ಸದನದಲ್ಲಿ ಸಿದ್ಧಲಿಂಗಯ್ಯ" – ಅವರನ್ನು ಕುರಿತು ಬಂದ ಇತ್ತೀಚಿನ ಕೃತಿ. ಈ ಭಾಗದಲ್ಲಿ ಬಡತನದ ದಟ್ಟ ಚಿತ್ರಣ ಕರುಳಿರಿಯುವಂತೆ ಮೂಡಿಬಂದಿದೆ.

ಪ್ರಸ್ತುತ 'ಮಹಾತ್ಮ ಗಾಂಧಿ ರಸ್ತೆಯ ಹಾಸ್ಟೆಲ್' ಎಂಬ ಗದ್ಯಭಾಗವನ್ನು ಅವರ ಆತ್ಮಚರಿತ್ರೆ 'ಊರುಕೇರಿ' ಕೃತಿಯಿಂದ ಆರಿಸಲಾಗಿದೆ.

**ಓದಿ ತಿಳಿಯಿರಿ:**

ದಲಿತ = ದಬ್ಬಾಳಿಕೆಗೆ, ಶೋಷಣೆಗೆ ಒಳಗಾದ

ಟ್ರಂಕು = ಕಬ್ಬಿಣದ ಪೆಟ್ಟಿಗೆ

ಪ್ರದರ್ಶನ = ತೋರಿಸುವಿಕೆ

ಪುಳಕಿತ = ರೋಮಾಂಚನ

ಚಹರೆ = ಲಕ್ಷಣ

ಅಸೂಯೆ = ಹೊಟ್ಟೆಕಿಚ್ಚು

ಸೌಜನ್ಯ = ಒಳ್ಳೆಯತನ, ಸಜ್ಜನಿಕೆ

ನಾಟಿವೈದ್ಯ = ಗಿಡಮೂಲಿಕೆಗಳ ಔಷಧಿ ಕೊಡುವ ವೈದ್ಯ.

## ಅಭ್ಯಾಸ

**ಅ. ಒಂದು ವಾಕ್ಯದಲ್ಲಿ ಉತ್ತರಿಸಿರಿ:**

೧. ಸಿದ್ಧಲಿಂಗಯ್ಯನವರು ಯಾವ ಕಾಲೇಜಿಗೆ ಸೇರಿದರು?

೨. ಹಾಸ್ಟೆಲಿನಲ್ಲಿ ಊಟಕ್ಕಾಗಿ ಏನೇನು ಕೊಡುತ್ತಿದ್ದರು?

೩. ಹಿರಿಯ ವಿದ್ಯಾರ್ಥಿ ಕಣ್ಣು ಪರೀಕ್ಷಿಸಿ ಏನೆಂದು ಘೋಷಿಸಿದ?

೪. ಸಿದ್ಧಲಿಂಗಯ್ಯನವರು ಯಾವ ಆಸ್ಪತ್ರೆಗೆ ಹೋಗಿ ತೋರಿಸಿದರು?

೫. ಸಿದ್ಧಲಿಂಗಯ್ಯನವರು ಯಾವ ಗ್ರಂಥಾಲಯಕ್ಕೆ ನಿತ್ಯವೂ ಹೋಗುತ್ತಿದ್ದರು?



**ಆ. ಎರಡು / ಮೂರು ವಾಕ್ಯಗಳಲ್ಲಿ ಉತ್ತರಿಸಿರಿ:**

೧. ಸಿದ್ಧಲಿಂಗಯ್ಯನವರು ಮಹಾತ್ಮಗಾಂಧಿ ರಸ್ತೆ ಹಾಸ್ಟೆಲಿಗೆ ಪ್ರಯಾಣಿಸಿದ ರೀತಿ ಹೇಗಿತ್ತು?

೨. ಮಹಾತ್ಮಗಾಂಧಿ ರಸ್ತೆಯ ಹಾಸ್ಟೆಲಿನ ಊಟದ ವ್ಯವಸ್ಥೆ ಹೇಗಿತ್ತು?

೩. ಜಾಂಡೀಸ್ ಖಾಯಿಲೆ ಇದೆ ಎಂದು ಹಿರಿಯ ವಿದ್ಯಾರ್ಥಿ ಘೋಷಿಸಲು ಕಾರಣವೇನು?

೪. ಹಿರಿಯ ವಿದ್ಯಾರ್ಥಿಯ ಬಗ್ಗೆ ಅವರಿವರು ಏನು ಹೇಳಿದರು?

೫. ಹಾಸ್ಟೆಲಿಗೆ ಹೋಗುವ ದಾರಿಯಲ್ಲಿದ್ದ ಗ್ರಂಥಾಲಯ ಯಾವುದು? ಅದರಿಂದ ಪ್ರಯೋಜನವನ್ನು ಸಿದ್ಧಲಿಂಗಯ್ಯನವರು ಹೇಗೆ ಪಡೆದರು?

**ಇ. ಐದಾರು ವಾಕ್ಯಗಳಲ್ಲಿ ಉತ್ತರಿಸಿರಿ:**

೧. ಸಿದ್ಧಲಿಂಗಯ್ಯನವರು ಹಾಸ್ಟೆಲಿಗೆ ಪ್ರಯಾಣಿಸಿದ ಪ್ರಸಂಗ ವಿವರಿಸಿ.

**ಈ. ಸಂದರ್ಭದೊಡನೆ ವಿವರಿಸಿ:**

೧. ನನ್ನ ಬಳಿ ಒಂದು ಮುರುಕಲು ಟ್ರಂಕು ಮತ್ತು ಹರುಕಲು ಚಾಪೆ ಇತ್ತು.

೨. ಬೆಳದಿಂಗಳು ಮರಗಿಡಗಳ ಮೇಲೆ ಬಿದ್ದ ದೃಶ್ಯ ಮನೋಹರವಾಗಿತ್ತು.

೩. ಉಣ್ಣುವುದನ್ನು ಕಂಡು ಅಸೂಯೆ ಪಟ್ಟವರು ಉಂಟು.

೪. ಸೌಜನ್ಯದಿಂದ ನಾನು ಹೋದೆ.

೫. ಅವನ ಮಾತನ್ನು ಕಡೆಗಣಿಸುವಂತಿಲ್ಲವೆಂದೂ ಹೇಳಿದರು.

## ಭಾಷಾಭ್ಯಾಸ

**ಅ. ಬಿಟ್ಟಸ್ಥಳವನ್ನು ಸೂಕ್ತ ಪದದಿಂದ ತುಂಬಿರಿ:**

೧. ಮಹಾತ್ಮಾಗಾಂಧಿ ರಸ್ತೆಯಲ್ಲಿರುವ ದಲಿತ ವಿದ್ಯಾರ್ಥಿ ನಿಲಯದಲ್ಲಿ ______ ಸಿಕ್ಕಿತು.

೨. ಹತ್ತು ಹದಿನೈದು ದಿನಗಳಲ್ಲಿ ಊಟದ ಪರಿಣಾಮದಿಂದ ನನ್ನ ದೈಹಿಕ ______ ಬದಲಾಯಿತು.

೩. ತಟ್ಟೆ ತುಂಬಿದ ನಂತರ ______ ನೋಡುತ್ತಿದ್ದೆ.

೪. ಹಿರಿಯ ವಿದ್ಯಾರ್ಥಿಯೊಬ್ಬ ನನ್ನನ್ನು ತನ್ನ ______ ಕರೆದ.

೫. ಈ ಅವಧಿಯಲ್ಲಿ ಗ್ರಂಥಾಲಯದ ಪ್ರಯೋಜನವನ್ನು ಬಹಳ ______

**ಆ. ಕೆಳಗಿನ ಶಬ್ದಗಳನ್ನು ಬಿಡಿಸಿ ಬರೆಯಿರಿ:**

ಮನೆಯನ್ನು, ಚಾಪೆಯನ್ನು, ಮಾಂಸಾಹಾರ, ಗ್ರಂಥಾಲಯ

**ಇ. ಗುಂಪಿಗೆ ಸೇರದ ಪದ ಆರಿಸಿ ಬರೆಯಿರಿ.**

೧. ಅನ್ನ, ಚಪಾತಿ, ಹಾಲು, ರೊಟ್ಟಿ

೨. ಟ್ರಂಕು, ತಟ್ಟೆ, ಲೋಟ, ತಂಬಿಗೆ

೩. ಸ್ನೇಹಿತ, ಸಹೋದರ, ಗೆಳೆಯ, ಮಿತ್ರ

**ಈ. ಕೆಳಗಿನ ಪದಗಳನ್ನು ಸ್ವಂತ ವಾಕ್ಯದಲ್ಲಿ ಬಳಸಿ ಬರೆಯಿರಿ:**

೧. ಕಾಲ್ನಡಿಗೆ, ೨. ಪ್ರದರ್ಶನ, ೩.ಪುಳಕಿತನಾಗು, ೪. ಉದ್ದೇಶಪೂರ್ವಕ ೫. ಪ್ರಯೋಜನ

**ಉ. ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ:**

ಸುಖ, ಸಾಕು, ಪ್ರಾರಂಭ, ಮೇಲೆ

## ಚಟುವಟಿಕೆ

೧. ಡಾ॥ ಸಿದ್ಧಲಿಂಗಯ್ಯ ಅವರ ಊರುಕೇರಿ ಹಾಗೂ ಊರುಕೇರಿ ಭಾಗ ೨ ನ್ನು ಓದಿರಿ.

೨. ಕನ್ನಡದ ಪ್ರಸಿದ್ಧ ಲೇಖಕರು / ಕವಿಗಳ 'ಜೀವನಚರಿತ್ರೆ' ಪುಸ್ತಕಗಳನ್ನು ಓದಿರಿ.

೩. ನಿಮ್ಮ ಹಿರಿಯರು ಹೇಳುವ ಹಿರಿಯರೊಬ್ಬರ ಜೀವನ ಚರಿತ್ರೆಯನ್ನು ಬರೆಯಿರಿ.

# ಜೋಡಿ ನುಡಿಗಳು

ದ್ವಿರುಕ್ತಿಯಂತೆಯೇ ಬೇರೊಂದು ಬಗೆಯ ಶಬ್ದಗಳನ್ನು ಭಾಷೆಯಲ್ಲಿ ಪ್ರಯೋಗಿಸಲಾಗುತ್ತದೆ. ಇವು ದ್ವಿರುಕ್ತಿಗಳಲ್ಲ. ಜೋಡುನುಡಿಗಳೆಂದು ಕರೆಯುತ್ತಾರೆ. ಪ್ರಾಸಕ್ಕಾಗಿ ಭಾಷೆಯ ಸೊಗಸನ್ನು ಹೆಚ್ಚಿಸಲು ಇವನ್ನು ಬಳಸಿದಂತೆ ತೋರುತ್ತದೆ. ಅರ್ಥದ ದೃಷ್ಟಿಯಿಂದ ಸಮಾನಾರ್ಥಕ ಜೋಡುನುಡಿ, ಪೂರಕಾರ್ಥಕ ಜೋಡುನುಡಿ, ವಿರುದ್ಧಾರ್ಥಕ ಜೋಡುನುಡಿ ಮತ್ತು ಅಸ್ಪಷ್ಟವಾದ ಜೋಡು ನುಡಿಗಳೆಂದು ವಿಭಜಿಸಬಹುದು.

| **ಸಮಾನಾರ್ಥಕ ಜೋಡುನುಡಿ** | **ಪೂರಕಾರ್ಥಕ ಜೋಡು ನುಡಿ** | **ವಿರುದ್ಧಾರ್ಥಕ ಜೋಡು ನುಡಿ** | **ಅಸ್ಪಷ್ಟಾರ್ಥಕ ಜೋಡುನುಡಿ** |
|---|---|---|---|
| ಅವಳಿ ಜವಳಿ | ಅಂಕೆಸಂಕೆ | ಅಂದಾದುಂದಿ | ಅರೆಬರೆ |
| ಅಂದಚಂದ | ಅಚ್ಚು ಮೆಚ್ಚು | ಆದಿ ಅಂತ್ಯ | ಅವಡು ಸವಡು |
| ಎಡರು ತೊಡರು | ಅಕ್ಕ ಪಕ್ಕ | ಕನಸು ನನಸು | ಅಡ್ರಾ ಬಡ್ರಾ |
| ಏರುಪೇರು | ಅಲ್ಲೋಲ ಕಲ್ಲೋಲ | ಕಳ್ಳಕಾಕರು | ಅಡ್ಡಾ ದಿಡ್ಡಿ |
| ಉಡುಗೆ ತೊಡುಗೆ | ಆಚಾರ ವಿಚಾರ | ಕಾಡು ನಾಡು | ಐಬುಸೈಬು |
| ಕಪ್ಪ ಕಾಣಿಕೆ | ಆಸ್ತಿ – ಅಂತಸ್ತು | ಧಾರಣ ಪಾರಣ | ಕೂಲಿನಾಲಿ |
| ಕಸಕಡ್ಡಿ | ಎಕ್ಕ ಪಕ್ಕ | ನೋವು ನಲಿವು | ಗರ್ತಿಗಮ್ಮತ್ತು |
| ಗೆಡ್ಡೆ ಗೆಣಸು | ಓದು ಬರಹ | ಬೇವು ಬೆಲ್ಲ | ಮರ ಮಂದಿ |
| ಜಾತ್ರೆ ಯಾತ್ರೆ | ಕನಸು ಮನಸು | ಭುವಿ ಬಾನು | ಯಾಪಾರ ಸಾಪಾರ |
| ತಳಬುಡ | ಕಟ್ಟು ಕಟ್ಟಳೆ | ಪಂಡಿತ ಪಾಮರ | ಹುಳು ಹುಪ್ಪಟೆ |
| ತೊಳಗು ಬೆಳಗು | ಕಾಡು ಮೇಡು | ಬೆಳಗು ಬೈಗು | |
| ದವಸ ಧಾನ್ಯ | ಕಾಯಿ ಕಸರು | ಲೀಲಾಜಾಲ | |
| ದುಗುಡ ದುಮ್ಮಾನ | ಗತ್ತು ಗಮ್ಮತ್ತು | ಸಿಹಿ ಕಹಿ | |
| ನೆರೆತೆರೆ | ಗಿಡಗಂಟಿ | ಸುಖದುಃಖ | |
| ನೆರೆಹೊರೆ | ನೀರು ನಿಡಿ | ಹಗಲು ರಾತ್ರಿ | |
| ಬಂಧು ಬಳಗ | ನೀತಿ ನಿಯಮ | ಹೆಚ್ಚಾಗು ಪೆಚ್ಚಾಗು | |
| ಬೆಟ್ಟಗುಡ್ಡ | ನಡೆನುಡಿ | | |
| ಮಕ್ಕಳು ಮರಿ | ನಾಡುನುಡಿ | | |
| ಮಾನ ಮರ್ಯಾದೆ | ತಿಂಡಿ ತೀರ್ಥ | | |
| ರೀತಿ ನೀತಿ | ಪಾತ್ರೆ–ಪರಡಿ | | |
| ಸುತ್ತ ಮುತ್ತ | ಪೋಲಿಪಟಿಂಗ | | |
| ಹಾದಿ ಬೀದಿ | ಬಟ್ಟೆ ಬರೆ | | |
| | ಮನೆ ಮಠ | | |
| | ಹಿತಮಿತ | | |

# ದ್ವಿರುಕ್ತಿಗಳು

ಒಂದು ಶಬ್ದವನ್ನು ಎರೆಡೆರೆಡು ಬಾರಿ ಉಚ್ಚರಿಸುವುದನ್ನು ದ್ವಿರುಕ್ತಿ ಎನ್ನುತ್ತಾರೆ.

ಉದಾ : ಅಭ್ಯರ್ಥಿಯು ಮತದಾರರ **ಮನೆ ಮನೆಗಳಿಗೆ** ಹೋಗಿ ಮತ ಯಾಚಿಸಿದನು.

**ಬೇಗ ಬೇಗ** ನಡೆಯಿರಿ

ಅವರು **ಓಡಿ ಓಡಿ** ದಣಿದರು

**ಈಗೀಗ** ಅವರಿಗೆ ವ್ಯಾಪಾರ ಆಗುತ್ತಿದೆ.

ಅವು **ದೊಡ್ಡ ದೊಡ್ಡ** ಗ್ರಂಥಗಳು.

ಮೇಲಿನ ಉದಾಹರಣೆಗಳಲ್ಲಿ **ಬೇಗ, ಓಡಿ, ಈಗ, ದೊಡ್ಡ** ಶಬ್ದಗಳನ್ನು ಎರೆಡೆರೆಡು ಬಾರಿ ಪ್ರಯೋಗಿಸಲಾಗಿದೆ. ದ್ವಿರುಕ್ತಿಗಳ ಪ್ರಯೋಗದಿಂದ ಮನಸ್ಸಿನ ಮೇಲೆ ಪರಿಣಾಮ ಉಂಟಾಗುತ್ತದೆ. ಭಾವನೆಗಳ ಅಭಿವ್ಯಕ್ತಿಗೆ ಪುಷ್ಟಿ ದೊರೆಯುತ್ತದೆ.

**ಒಂದು ವಿಶೇಷಾರ್ಥವನ್ನು ವ್ಯಕ್ತ ಪಡಿಸುವುದಕ್ಕಾಗಿ ಒಂದು ಪದವನ್ನೋ, ಒಂದು ವಾಕ್ಯವನ್ನೋ ಎರಡೆರಡು ಸಲ ಪ್ರಯೋಗ ಮಾಡುವುದಕ್ಕೆ ದ್ವಿರುಕ್ತಿ ಎನ್ನುವರು.**

**ದ್ವಿರುಕ್ತಿಯಲ್ಲಿ ಕೆಲವು ವಿಶೇಷ ರೂಪಗಳು**

ಮೊದಲು + ಮೊದಲು = ಮೊಟ್ಟ ಮೊದಲು, ಮೊತ್ತ ಮೊದಲು

ಕಡೆಗೆ + ಕಡೆಗೆ = ಕಟ್ಟಕಡೆಗೆ, ಕಡೆಕಡೆಗೆ

ನಡುವೆ + ನಡುವೆ = ನಟ್ಟನಡುವೆ, ನಡುನಡುವೆ

ಬಯಲು + ಬಯಲು = ಬಟ್ಟಬಯಲು

ತುದಿ + ತುದಿ = ತುತ್ತ ತುದಿ, ತುಟ್ಟ ತುದಿ

ಕೊನೆಗೆ + ಕೊನೆಗೆ = ಕೊನೆ ಕೊನೆಗೆ

ಮೆಲ್ಲನೆ + ಮೆಲ್ಲನೆ = ಮೆಲ್ಲಮೆಲ್ಲನೆ

ಕೆಳಗೆ + ಕೆಳಗೆ = ಕೆಳಕೆಳಗೆ

ಕುಸಿದು + ಕುಸಿದು = ಕುಸಿಕುಸಿದು

ಹಸಿರು + ಹಸಿರು = ಹಚ್ಚ ಹಸಿರು

ಹೊಸದು + ಹೊಸದು = ಹೊಚ್ಚ ಹೊಸದು

ನುರಿ + ನುರಿ = ನುಗ್ಗುನುರಿ

ಬಡಿ + ಬಡಿ = ಬಗ್ಗುಬಡಿ

# ಅವ್ಯಯಗಳು

**ಕೆಳಗಿನ ಉದಾಹರಣೆಗಳನ್ನು ಗಮನಿಸಿರಿ:**

ಉದಾಹರಣೆ : ನೀನು **<u>ಮೆಲ್ಲಗೆ</u>** ಹೋಗು

ಅವಳು <u>ಮೆಲ್ಲಗೆ</u> ಬರಲಿ

ಅವರು <u>ಮೆಲ್ಲಗೆ</u> ಹೋಗಲಿ

ಅದು <u>ಮೆಲ್ಲಗೆ</u> ಹೋಗಲಿ

ಅವು <u>ಮೆಲ್ಲಗೆ</u> ಹೋಗಲಿ

ಮೇಲಿನ ಉದಾಹರಣೆಗಳಲ್ಲಿ "ಮೆಲ್ಲಗೆ" ಎನ್ನುವ ಪದ ಎಲ್ಲ ವಾಕ್ಯಗಳಲ್ಲಿಯೂ ಒಂದೇ ತೆರನಾಗಿದೆ. ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕ ಲಿಂಗಗಳಲ್ಲೂ ರೂಪ ವ್ಯತ್ಯಾಸ ಹೊಂದಿಲ್ಲ. ಅಲ್ಲದೆ ಅದಕ್ಕೆ ಯಾವ ಪ್ರತ್ಯಯವೂ ಸೇರಿಲ್ಲ. ನಾಮಪದ, ಕ್ರಿಯಾಪದಗಳಂತೆ ಯಾವ ವ್ಯತ್ಯಾಸವನ್ನೂ ಪಡೆದಿಲ್ಲ. ಹೀಗೆ ರೂಪವ್ಯತ್ಯಾಸಗೊಳ್ಳದ ಪದಗಳು ಸಾಕಷ್ಟು ಇವೆ. ಅಂಥವನ್ನು ಅವ್ಯಯಗಳು ಎನ್ನುತ್ತಾರೆ.

**ಲಿಂಗ, ವಚನ, ವಿಭಕ್ತಿಗಳಿಂದ ರೂಪಭೇದವನ್ನು ಹೊಂದದೆ, ಏಕರೂಪವಾಗಿರುವ ಶಬ್ದಗಳನ್ನು ಅವ್ಯಯಗಳು ಎನ್ನುತ್ತಾರೆ.**

ಅವ್ಯಯಗಳಲ್ಲಿ ೧. ಸಾಮಾನ್ಯಾವ್ಯಯ, ೨. ಅನುಕರಣಾವ್ಯಯ, ೩. ಭಾವಸೂಚಕಾವ್ಯಯ, ೪. ಕ್ರಿಯಾರ್ಥಕಾವ್ಯಯ, ೫. ಸಂಬಂಧಾರ್ಥಕಾವ್ಯಯ, ೬. ಕೃದಂತಾವ್ಯಯ, ೭. ತದ್ಧಿತಾಂತಾವ್ಯಯ, ೮.ಅವಧಾರಣಾರ್ಥಕಾವ್ಯಯಗಳೆಂಬ ವಿಧಗಳಿವೆ.

**ಅನುಕರಣಾವ್ಯಯ:**

ಉದಾಹರಣೆ : ಬೆಂಕಿಯು **ಧಗ ಧಗ** ಉರಿಯಿತು.

ಕವಣೆಯ ಕಲ್ಲು **ರೊಯ್ಯನೆ** ಹಾರಿತು.

ಆಕಳು **ದಡದಡ** ಓಡಿತು

ಧಗಧಗ, ರೊಯ್ಯನೆ, ದಡದಡ – ಇಂಥವು ಅರ್ಥವಿಲ್ಲದ ಧ್ವನಿ ವಿಶೇಷಗಳಾಗಿವೆ. ತಾನು ಕೇಳಿದ ಧ್ವನಿಗಳನ್ನು ಅನುಕರಣೆ ಮಾಡಿ ಹೇಳಿದ ಶಬ್ದಗಳಾಗಿವೆ.

ಹೀಗೆ ಅರ್ಥವಿಲ್ಲದ, ತಾನುಕೇಳಿದ ಯಾವುದೇ ಧ್ವನಿಯನ್ನು ಅನುಕರಿಸುವ ಶಬ್ದಗಳೇ ಅನುಕರಣಾವ್ಯಯಗಳು. ಉದಾಹರಣೆ : ಪಟಪಟ, ಚಟಪಟ, ಕರಕರ, ಗುಡುಗುಡು, ತಟತಟ, ಸಿಮಿಸಿಮಿ, ಜುಳುಜುಳು, ರೊಯ್ಯನೆ, ಸುಯ್ಯನೆ, ಧಿಗಿಲನೆ, ಭೋರನೆ – ಇತ್ಯಾದಿ.

# ೧೧. ಹೊನ್ನೆಯ ಮರದ ನೆರಳು

– ಜನಪದ ಸಾಹಿತ್ಯ

**ಪ್ರವೇಶ ಮತ್ತು ಆಶಯ :**

ಜನಪದರು ತಮ್ಮ ನೋವು, ನಲಿವು, ಕಷ್ಟ, ಸುಖ, ದುಃಖ ದುಮ್ಮಾನಗಳನ್ನು, ಶಾರೀರಿಕ ಆಯಾಸಗಳನ್ನು ಪರಿಹರಿಸಿಕೊಳ್ಳಲು ಹಲವಾರು ಮಾರ್ಗಗಳನ್ನು ಕಂಡುಕೊಂಡಿದ್ದರು. ಅವುಗಳಲ್ಲಿ ಮನರಂಜನೆಯ ಕ್ರೀಡೆಗಳು, ಕಥೆ, ಕೋಲಾಟ, ಹಾಡು, ಒಗಟು ಇತ್ಯಾದಿ. ಹೊನ್ನೆಯ ಮರ ಪದ್ಯದಲ್ಲಿ ಜಗವೆಲ್ಲ ಸುಭಿಕ್ಷವಾಗಿರಲಿ ಎಂಬ ಸದಾಶಯವಿದೆ. ಪ್ರಕೃತಿಯ ವರ್ಣನೆ, ತಾಯಿ ಇಲ್ಲದಂತವರು, ಹೆಣ್ಣಿಗೆ ತನ್ನ ತವರುಮನೆಯ ಬಗೆಗಿನ ಮಮಕಾರ, ಮಕ್ಕಳಾಟದ ಮಹಿಮೆ ಮುಂತಾದವುಗಳನ್ನು ಹೃದಯಂಗಮವಾಗಿ ವರ್ಣಿಸಲಾಗಿದೆ.

ಮಾರುದ್ದ ಪೈರಾಗಲಿ ಮೊಳದುದ್ದ ತೆನೆಯಾಗಲಿ
ಬಡವನ ಮನೆಗೆ ಸಿರಿ ಬರಲಿ । ಭೂಮಿತಾಯಿ
ಕಂದವ್ನ ಹಸಿವು ಇಂಗೋಗ್ಲಿ ॥ ॥ ೧ ॥

ನೆಲದಾಗ ಗಿಡ ಚಲುವ ಮಾವಿನ ಗಿಡ ಚಲುವ
ಹಕ್ಕಿ ಪಕ್ಕ್ಯಾಗ ಗಿಣಿ ಚಲುವ । ಮ್ಯಾಲೀನ
ಚಿಕ್ಕ್ಯಾಗ ಚಲುವ ಚಂದ್ರಾಮ ॥ ॥ ೨ ॥

ತಾಯಿಲ್ದತವರೀಗಿ ಹೋಗದಿರು ನನ ಮನವೆ
ನೀರಿಲ್ದ ಕೆರಿಗಿ ಕರ ಬಂದು । ತಿರುಗಾಗ
ಆಗ ನೋಡಿದರ ದುಃಖಗಳ ॥ ॥ ೩ ॥

ತೊಟ್ಟೀಲ ಹೊತ್ಕೊಂಡು ತೌರ್ಬಣ್ಣ ಉಟ್ಕೊಂಡು
ಅಪ್ಪ ಕೊಟ್ಟೆಮ್ಮೆ ಹೊಡಕೊಂಡು । ತಂಗ್ಯವ್ವ
ತಿಟ್ಟತ್ತಿ ತಿರುಗಿ ನೋಡ್ಯಾಳ ॥ ॥ ೪ ॥

ನನ್ನಯ್ಯನಂತೋರು ಹನ್ನೆರಡು ಮಕ್ಕಳು
ಹೊನ್ನೆಯ ಮರದ ನೆರಳಲ್ಲಿ । ಆಡುವಾಗ
ಸನ್ನೇಸಿ ಜಪವ ಮರೆತಾನು ॥ ॥ ೫ ॥



**ಕವಿ–ಕಾವ್ಯ ಪರಿಚಯ :**

'ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತಿ ಮತಿಗಳ್' ಎಂಬ ಕವಿರಾಜ ಮಾರ್ಗಕಾರನ ಮಾತಿನಂತೆ ನಮ್ಮ ಪೂರ್ವಜರು ಯಾವುದೇ ಶಾಸ್ತ್ರ ಗ್ರಂಥಗಳನ್ನು ಓದದಿದ್ದರೂ ಬಲು ಸೊಗಸಾದ ಕಾವ್ಯಗಳನ್ನು ಬರೆಯಬಲ್ಲ ಕಾವ್ಯ ಕೌಶಲ್ಯ ಅವರಲ್ಲಿತ್ತು. ಹಾಗೆ ಬರೆಯಲ್ಪಟ್ಟ ಸಾಹಿತ್ಯವೇ ಜನಪದ ಸಾಹಿತ್ಯ. ಜನರ ಬಾಯಿಯಿಂದ ಬಾಯಿಗೆ ಹರಿದು ಬಂದಿರುವ ಮೌಖಿಕ ಸಾಹಿತ್ಯ ಪರಂಪರೆಯೇ ಜನಪದ ಸಾಹಿತ್ಯ.

ಜನಪದ ಸಾಹಿತ್ಯದಲ್ಲಿ ತ್ರಿಪದಿಗಳಿಗೆ ಪ್ರಮುಖ ಸ್ಥಾನವಿದ್ದು, ಪ್ರತಿ ತ್ರಿಪದಿಗಳು ಮುಕ್ತಕಗಳಂತೆ ಬಿಡಿ ಪದ್ಯಗಳಾಗಿವೆ. ತ್ರಿಪದಿ ದೇಸಿ ಛಂದಸ್ಸು.

ಸಮೂಹಸೃಷ್ಟಿ, ಗೇಯತೆ, ಜನಪ್ರಿಯತೆ ಮುಂತಾದವುಗಳೇ ಜನಪದ ಸಾಹಿತ್ಯದ ಪ್ರಮುಖ ಲಕ್ಷಣಗಳು. ಈ ಸಾಹಿತ್ಯದಲ್ಲಿ ಪ್ರಕೃತಿಯ ವರ್ಣನೆ, ಮಾನವೀಯ ಮೌಲ್ಯಗಳು, ಗಂಡ–ಹೆಂಡತಿ ಸಂವಾದ, ತವರು ಮನೆಯ ಪ್ರೀತಿ, ಅಭಿಮಾನ, ಅಕ್ಕರೆ, ತಾಯಿಯ ಹಾರೈಕೆ ಮುಂತಾದ ವಸ್ತು ವೈವಿಧ್ಯತೆಗಳು ಹಾಸುಹೊಕ್ಕಾಗಿವೆ.

'ಹೊನ್ನೆಯ ಮರ' ಭಾಗದಲ್ಲಿನ ತ್ರಿಪದಿಗಳನ್ನು ಶ್ರೀ ದೇ.ಜವರೇಗೌಡರವರು ಸಂಪಾದಿಸಿರುವ 'ಜನಪದ ಗೀತಾಂಜಲಿ' ಎಂಬ ಜಾನಪದ ಗೀತೆಗಳ ಸಂಕಲನದಿಂದ ಆರಿಸಲಾಗಿದೆ.

**ಓದಿ ತಿಳಿಯಿರಿ:**

ಮಾರುದ್ದ – ಎರಡು ಕೈಗಳನ್ನು ಅಡ್ಡವಾಗಿ ಚಾಚಿದಾಗ ಉಂಟಾಗುವ ಅಳತೆ ಅಥವಾ ನಾಲ್ಕು ಮೊಳ ಉದ್ದದ ಅಳತೆ, ಇಂಗೋಗ್ಲಿ – ಕಡಿಮೆಯಾಗಲಿ, ಬತ್ತಿಹೋಗಲಿ, ಪಕ್ಕಿ – ಹಕ್ಕಿ, ಪಕ್ಷಿ, ತೌರ್ಬಣ್ಣ – ತವರಿನವರು ನೀಡಿದ ಸೀರೆ, ತಿಟ್ಟು – ದಿಬ್ಬ



## ಅಭ್ಯಾಸಗಳು

**ಅ. ಒಂದು ವಾಕ್ಯದಲ್ಲಿ ಉತ್ತರಿಸಿರಿ:**

೧. ಕಂದನ ಹಸಿವನ್ನು ಯಾರು ಇಂಗಿಸುವರು?

೨. ಚಿಕ್ಕ್ಯಾಗ ಚಲುವ ಯಾರು?

೩. ಹೆಣ್ಣು ಏನನ್ನು ಹೊತ್ತು ಹೊರಟಿದ್ದಾಳೆ?

೪. ಎಮ್ಮೆಯನ್ನು ಯಾರು ಕೊಟ್ಟಿದ್ದಾರೆ?

೫. ಸನ್ಯಾಸಿ ಜಪವನ್ನು ಯಾವಾಗ ಮರೆತನು?

**ಆ. ಎರಡು / ಮೂರು ವಾಕ್ಯಗಳಲ್ಲಿ ಉತ್ತರಿಸಿರಿ:**

೧. ಜನಪದರ ಹಾರೈಕೆ ಏನು?

೨. ಜನಪದರು ಪ್ರಕೃತಿಯನ್ನು ಹೇಗೆ ವರ್ಣಿಸಿದ್ದಾರೆ?

೩. ತಾಯಿಲ್ಲದ ತವರನ್ನು ಜನಪದರು ಹೇಗೆ ವರ್ಣಿಸಿದ್ದಾರೆ?

೪. ಹೆಣ್ಣು ಮಗಳು ಗಂಡನ ಮನೆಗೆ ಹೇಗೆ ಹೊರಟಿದ್ದಾಳೆ?

೫. ಮಕ್ಕಳಾಟದ ಮಹಿಮೆಯನ್ನು ಜನಪದರು ವರ್ಣಿಸಿರುವ ರೀತಿಯನ್ನು ತಿಳಿಸಿ.

**ಇ. ಸಂದರ್ಭದೊಡನೆ ಸ್ವಾರಸ್ಯವನ್ನು ವಿವರಿಸಿರಿ:**

೧. ಬಡವನ ಮನೆಗೆ ಸಿರಿ ಬರಲಿ

೨. ತಾಯಿಲ್ದ ತವರೀಗಿ ಹೋಗದಿರು

೩. ತಿಟ್ಹತ್ತಿ ತಿರುಗಿ ನೋಡ್ಯಾಳ

೪. ಸನ್ನೇಸಿ ಜಪವ ಮರೆತಾನು

## ಭಾಷಾಭ್ಯಾಸ

**ಅ. ಈ ಪದಗಳ ಗ್ರಾಂಥಿಕ ರೂಪ ತಿಳಿಸಿರಿ:**

ಕಂದವ್ನ, ಇಂಗೋಗ್ಲಿ, ಪಕ್ಕ್ಯಾಗ, ಮ್ಯಾಲೀನ, ಚಿಕ್ಕ್ಯಾಗ, ತಾಯಿಲ್ದ, ನೀರಿಲ್ದ, ತಿಟ್ಹತ್ತಿ, ಸನ್ನೇಸಿ

**ಆ. ಬಿಟ್ಟ ಸ್ಥಳಗಳಲ್ಲಿ ಸೂಕ್ತವಾದ ಪದವನ್ನು ತುಂಬಿರಿ:**

೧. ಬಡವನ ಮನೆಗೆ _______ ಬರಲಿ.

೨. ಚಿಕ್ಕ್ಯಾಗ ಚಲುವ _______

೩. ತಾಯಿಲ್ದ ತವರೀಗಿ _______ ನನ ಮನವೆ

೪. ತೊಟ್ಟೀಲ ಹೊತ್ಕೊಂಡು _______ ಉಟ್ಕೊಂಡು

೫. ನನ್ನಯ್ಯನಂತೋರು _______ ಮಕ್ಕಳು

**ಇ. ವಿರುದ್ಧಾರ್ಥಕ ರೂಪಗಳನ್ನು ಬರೆಯಿರಿ:**

ಬಡವ, ದುಃಖ

**ಈ. ಮಾದರಿಯಂತೆ ಐದು ಪದಗಳನ್ನು ಬರೆಯಿರಿ:**

ಸಿರಿ + ತನ = ಸಿರಿತನ, ಸಿರಿ + ವಂತ = ಸಿರಿವಂತ

## ಚಟುವಟಿಕೆ:

೧. ನಿಮ್ಮ ಗ್ರಾಮ / ಪ್ರದೇಶದಲ್ಲಿ ಹಾಡುವ ಆರತಿ ಹಾಡು, ರಾಗಿ ಬೀಸುವ ಹಾಡು, ಜನಪದ ಕಥೆಗಳನ್ನು ಸಂಗ್ರಹಿಸಿರಿ.

೨. ಜನಪದ ಗೀತೆಗಳ ಧ್ವನಿ ಮುದ್ರಿಕೆಗಳನ್ನು ಆಲಿಸಿರಿ.

೩. ರಾಮನಗರದ ಬಳಿ ಇರುವ ಜಾನಪದ ಲೋಕಕ್ಕೆ ಭೇಟಿ ನೀಡಿರಿ.

# ೧೨. ಪಾಂಡಿತ್ಯದ ಡಿ.ಎಲ್. ನರಸಿಂಹಾಚಾರ್

– ಎಂ. ಎಂ. ಕಲಬುರ್ಗಿ

**ಪ್ರವೇಶ ಮತ್ತು ಆಶಯ :**

'ವಿದ್ವಾನ್ ಸರ್ವತ್ರ ಪೂಜ್ಯತೆ' ಎಂಬಂತೆ ಪಾಂಡಿತ್ಯಕ್ಕೆ ವ್ಯಾಪಕ ಪುರಸ್ಕಾರವಿದೆ. ವಿದ್ವತ್ತನ್ನು ಗಳಿಸಲು ನಿರಂತರವಾದ ಆಸಕ್ತಿ, ತಾಳ್ಮೆ ಮತ್ತು ಪರಿಶ್ರಮಗಳು ಅಗತ್ಯ. ಪಾಂಡಿತ್ಯಗಳಿಕೆಯ ಹಾದಿಯಲ್ಲಿನ ಪಯಣ ದೀರ್ಘವಾದುದು. ಇಲ್ಲಿ ನಡೆದಷ್ಟು ದಾರಿಯಿದೆ, ಪಡೆದಷ್ಟು ಭಾಗ್ಯವಿದೆ.

ನಮ್ಮ ನಾಡಿನ ಅಗ್ರಗಣ್ಯ ವಿದ್ವಾಂಸರಲ್ಲಿ ಡಾ॥ ಡಿ.ಎಲ್. ನರಸಿಂಹಾಚಾರ್ಯರೂ ಒಬ್ಬರು. ಪಾಂಡಿತ್ಯಕ್ಕೆ ಮತ್ತೊಂದು ಹೆಸರೇ ಡಿ.ಎಲ್.ಎನ್. ಇವರ ನಿಷ್ಕಲ್ಮಶ ಮನಸ್ಸು, ಪಂಡಿತ ಪರಂಪರೆಯನ್ನು ರೂಪಿಸಿದ ಬಗೆ, ವೃತ್ತಿನಿಷ್ಠೆ ಮತ್ತು ಕನ್ನಡ ಸಾಹಿತ್ಯಕ್ಕೆ ಇವರು ಸಲ್ಲಿಸಿದ ಉತ್ಕೃಷ್ಟ ಸೇವೆಯನ್ನು ಪರಿಚಯಿಸಿದ್ದಾರೆ.

ಡಿ.ಎಲ್.ಎನ್. ಅವರನ್ನು ನೋಡಿ, ತೀ.ನಂ.ಶ್ರೀ ಅವರ ಮರಣ ದುಃಖವನ್ನು ಮರೆಯುತ್ತಿದ್ದ ಕನ್ನಡ ಸಾಹಿತ್ಯ ಪ್ರಪಂಚ ೦೮.೦೫.೭೧ ರಂದು ಬಂದ ಡಿ.ಎಲ್.ಎನ್. ಅವರ ನಿಧನ ವಾರ್ತೆಯಿಂದ ನಿಜಕ್ಕೂ ತತ್ತರಿಸಿ ಹೋಗಿದೆ.





ಬಿ.ಎಂ.ಶ್ರೀ., ಟಿ.ಎಸ್.ವೆಂಕಣ್ಣಯ್ಯ, ಎ.ಆರ್.ಕೃಷ್ಣಶಾಸ್ತ್ರಿಗಳ ಕಮ್ಮಟದಲ್ಲಿ ರೂಪುಗೊಂಡು ಕುವೆಂಪು, ಡಿ.ಕೆ.ಭೀಮಸೇನರಾವ್, ಕೆ.ವೆಂಕಟರಾಮಪ್ಪ, ಎನ್. ಅನಂತರಂಗಾಚಾರ್ ಮೊದಲಾದವರ ಜತೆಯಲ್ಲಿ ವಿದ್ಯಾರ್ಥಿ ಜೀವನವನ್ನು ಕಳೆದು, ಸಂಶೋಧನ ವಿದ್ಯಾರ್ಥಿಯೆಂದು, ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್‌ದ ಕನ್ನಡ ಪಂಡಿತರೆಂದು, ಮೈಸೂರಿನ ಮಹಾರಾಜಾ ಕಾಲೇಜು, ಯುವರಾಜಾ ಕಾಲೇಜು, ಬೆಂಗಳೂರಿನ ಸೆಂಟ್ರಲ್ ಕಾಲೇಜುಗಳಲ್ಲಿ ಕನ್ನಡ ಅಧ್ಯಾಪಕರೆಂದು, ಪರಿಷತ್ತು ಕೈಕೊಂಡ ನಿಘಂಟುವಿನ ಸಂಪಾದಕರೆಂದು ಬಹುಮುಖವಾಗಿ ದುಡಿದವರು ಡಿ.ಎಲ್.ಎನ್. ತಮ್ಮ ಜೀವಿತದ ಅವಧಿಯಲ್ಲಿ ಕನ್ನಡ, ಇಂಗ್ಲೀಷ್, ಸಂಸ್ಕೃತ, ತಮಿಳು, ತೆಲುಗು, ಪ್ರಾಕೃತ ಮೊದಲಾದ ಭಾಷೆಗಳನ್ನು ಕೈವರ್ತಿಸಿಕೊಂಡು, ಹಲವು ಶಾಸ್ತ್ರ – ಹಲವು ಸಾಹಿತ್ಯಗಳ ಪರಿವಾರವನ್ನು ಕಟ್ಟಿಕೊಂಡು ಕನ್ನಡದ ಕಣದಲ್ಲಿ ಇವರು ಮನದಣಿಯೆ ದುಡಿದರು. ಜಾಗತಿಕ ವಿದ್ವಾಂಸರ ಸಾಲಿನಲ್ಲಿ ನಿಲ್ಲಬಹುದಾದ ವಿದ್ವತ್ತನ್ನು ಸಂಪಾದಿಸಿದರು.

## ಕನ್ನಡದ ದಿಗ್ಗಜ:

ಅಧಿಕಾರದ ಬಲ, ಸ್ವಪಕ್ಷಗಳ ಬೆಂಬಲ, ದುಡ್ಡಿನ ದೌಲತ್ತು, ಮೋಹಕ ಮಾತುಗಾರಿಕೆ ಇವಾವೂ ಇಲ್ಲದೆ ಕೇವಲ ಪಾಂಡಿತ್ಯದ ಸಂಪತ್ತಿನಿಂದ ಜನತೆಯ ಗಮನ, ಗೌರವಗಳನ್ನು ಗಳಿಸಿದವರು ಡಿ.ಎಲ್.ಎನ್.

"ಡಿ.ಎಲ್.ಎನ್. ಎಂದರೆ ಪಾಂಡಿತ್ಯ, ಪಾಂಡಿತ್ಯವೆಂದರೆ ಡಿ.ಎಲ್.ಎನ್. ಹಳಗನ್ನಡ ಭಾಷೆ ಸಾಹಿತ್ಯದ ವಿಷಯಕ್ಕಂತೂ ಹಲವರು ಹೇಳುವಂತೆ ನಾನೂ ಬಲ್ಲಂತೆ ಅವರೊಂದು ಜಂಗಮ ಬೃಹತ್ಕೋಶ! ಹಳಗನ್ನಡದಲ್ಲಿ

ಅವರಿಗಿಂತಲೂ ನಿಷ್ಣಾತರಾದ ವಿದ್ವಾಂಸರನ್ನು ಸದ್ಯದಲ್ಲಿ ಕಾಣುವುದು ಅಶಕ್ಯವೆಂದೇ ನನ್ನ ಭಾವನೆ" ಕನ್ನಡದ ಇನ್ನೊಂದು ದಿಗ್ಗಜ ತೀ.ನಂ.ಶ್ರೀ. ಹೇಳಿದ ಮಾತಿದು. ಇದು ಪ್ರಶಂಸೆಯಲ್ಲ, ಸರಿಯಾದ ವಿಮರ್ಶೆಯೆಂದು ನನ್ನಂತೆ ಎಲ್ಲರ ಅಭಿಪ್ರಾಯ.

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಮುಖ್ಯಸ್ಥ ಪೀಠವನ್ನೇರುವ ಭಾಗ್ಯ ಅವರದಾಗದಿದ್ದರೂ ಪೀಠವೇರಿದವರನ್ನೂ, ಪೀಠ ಏರಬೇಕಾದವರನ್ನೂ ಸಿದ್ಧಗೊಳಿಸಿದವರು. ಮೈಸೂರು ವಿಶ್ವವಿದ್ಯಾನಿಲಯಕ್ಕೆ ಪಾಂಡಿತ್ಯದ ಭದ್ರಬುನಾದಿ ಹಾಕಿದವರು ಡಿ.ಎಲ್.ಎನ್. ೧೧ ಗ್ರಂಥ, ೭ ಮುನ್ನುಡಿ, ೧೨ ವಿಮರ್ಶಾ ಲೇಖನ, ೭೦ ಇತರ ಲೇಖನ – ಇದು ಡಿ.ಎಲ್.ಎನ್. ಸಾಹಿತ್ಯ ಸಂಪತ್ತು. ಅವರ ಈ ಕೃಷಿ ಮೊತ್ತದಲ್ಲಿ ಕಡಿಮೆಯೆಂದು ವಾದಿಸುವವರು ಸತ್ತ್ವದಲ್ಲಿ ಹಿರಿದೆಂದು ಒಪ್ಪಿಕೊಳ್ಳಲೇಬೇಕು. ಇತ್ತೀಚೆಗೆ ಬಂದ ನೂರಾರು ಪುಸ್ತಕಗಳು, ಅವರು ವರ್ಗದಲ್ಲಿ ನೀಡಿದ ಉಪನ್ಯಾಸದ ವಿಸ್ತೃತ ರೂಪಗಳೆಂದು ಅವರ ಶಿಷ್ಯರೇ ಅಭಿಮಾನಪಟ್ಟು ಹೇಳುವುದರಿಂದ ಅವರ ಸಾಹಿತ್ಯ ಕೃಷಿಯನ್ನು ಪುಸ್ತಕ ಸಂಖ್ಯೆಯಲ್ಲಿ ನೋಡದೆ, ಶಿಷ್ಯ ಸಂಖ್ಯೆಯಲ್ಲಿ ನೋಡುವುದು ನ್ಯಾಯವೆಂದು ತೋರುತ್ತದೆ. ಹಾಗೆ ನೋಡಿದರೆ, ಒಂದು ಇಡೀ ಪುಸ್ತಕದಿಂದ ಸಾಧ್ಯವಾಗದ ಬೆಳಕು ಅವರ ಒಂದು ಲೇಖನ ಒದಗಿಸುವುದರಿಂದ ಅವರ ಕೃಷಿ ಸಣ್ಣದಲ್ಲವೆಂದೇ ನನ್ನ ಭಾವನೆ.

**ವ್ಯಕ್ತಿತ್ವ ವಿಶೇಷ:**

ಡಿ.ಎಲ್.ಎನ್. ಅವರ ವ್ಯಕ್ತಿ ವಿಶೇಷತೆಯನ್ನು ಸಂಪಾದಕ, ಶಾಸ್ತ್ರಜ್ಞ, ಸಂಶೋಧಕ, ವಿಮರ್ಶಕ, ಪ್ರಾಧ್ಯಾಪಕ ಎಂದು ಬಿಡಿಸಿ ಹೇಳಬಹುದು.

ವಡ್ಡಾರಾಧನೆ ಅವರ ಸಂಪಾದನ ಸಾಮರ್ಥ್ಯಕ್ಕೆ ಒಂದು ಪರಮ ನಿದರ್ಶನ. ಅದರೊಂದಿಗೆ ನಡೆಸಿದ ೪೦ ವರ್ಷಗಳ ಅನುಸಂಧಾನದಿಂದಾಗಿ ಇತ್ತೀಚೆಗೆ ಸುದೀರ್ಘ ಪ್ರಸ್ತಾವನೆ, ಪರಿಪೂರ್ಣ ಪರಿಶಿಷ್ಟಗಳೊಂದಿಗೆ ಅದು ಮೊದಲಿನ ಮೂರುಪಟ್ಟು ಗಾತ್ರ ಪಡೆದು ಹೊರಬಂದಿತು.ಕನ್ನಡಕ್ಕೆ ಒಂದು ಅಪೂರ್ವ ಗದ್ಯ ಗ್ರಂಥ ಅಪೂರ್ವ ಶುದ್ಧಿಯಲ್ಲಿ ಲಭಿಸಿತು. ಈ ದಾರಿಯಲ್ಲಿ ಪಂಪರಾಮಾಯಣ ಸಂಗ್ರಹ, ಸುಕುಮಾರ ಚರಿತಂ, ಸಿದ್ಧರಾಮ ಚಾರಿತ್ರ ಮೊದಲಾದ ಗ್ರಂಥಗಳು ಪರಿಷ್ಕರಣ ಹೊಂದಿ ಪ್ರಕಟಗೊಂಡವು. ಈ ಸಂಸ್ಕರಣ ಪ್ರಸಂಗದಲ್ಲಿ ಅವರ ಬುದ್ಧಿ, ಮನಸ್ಸು ಯಾವ ರೀತಿ ದುಡಿಯುತ್ತಿದೆಯೆಂಬುದಕ್ಕೆ 'ಮಾನಸೋಲ್ಲಾಸದಲ್ಲಿ ಕನ್ನಡ ಛಂದಸ್ಸು' ಎಂಬ ಲೇಖನವನ್ನು ನೋಡಬೇಕು.

ಎಲ್ಲ ಕ್ಷೇತ್ರಗಳಲ್ಲಿಯೂ ಎದ್ದು ಕಾಣುವ ಡಿ.ಎಲ್.ಎನ್. ಅವರ ಶಾಸ್ತ್ರಮತಿ 'ಕನ್ನಡ ಗ್ರಂಥಸಂಪಾದನೆ' ಎಂಬ ಕೃತಿಯಲ್ಲಿ ಸಂಪೂರ್ಣ ಪ್ರಕಟಗೊಂಡಿದೆ. ಗ್ರಂಥ ಸಂಪಾದನೆಯ ವಿಧಾನಗಳನ್ನು ಕನ್ನಡಕ್ಕೆ ಅನ್ವಯಿಸಿ ಬರೆದ ಈ ಶಾಸ್ತ್ರಕೃತಿ ಕನ್ನಡದಲ್ಲಿ ಪ್ರಥಮ ಸಾಹಸ, ಪ್ರಥಮ ಸಾಧನೆ. ಅದರ ಪುಟಪುಟಗಳಲ್ಲಿ ಡಿ.ಎಲ್.ಎನ್. ಅವರ ಪ್ರಕಟಿತ, ಅಪ್ರಕಟಿತ ಕೃತಿಗಳ ಅಧ್ಯಯನದ ವ್ಯಾಪ್ತಿಯನ್ನು, ಸಾಹಿತ್ಯ ವ್ಯಾಸಂಗದ ಉದ್ದಗಲಗಳನ್ನು ಅರಿಯಬಹುದು.

ಸಂಶೋಧನೆ ಡಿ.ಎಲ್.ಎನ್. ಅವರ ಉಸಿರು. ಸಾಹಿತ್ಯ, ಶಾಸ್ತ್ರ, ಇತಿಹಾಸಗಳಲ್ಲೆಲ್ಲ ಇದು ಮಿಂಚಿನಂತೆ ಕಾರ್ಯಮಾಡಿದೆ. ಸಂಪಾದಿತ ಕೃತಿಗಳ ಮುನ್ನುಡಿಗಳೂ, ಪೊನ್ನನ 'ಭುವನೈಕ ರಾಮಾಭ್ಯುದಯ', ಕುಮುದೇಂದು ರಾಮಾಯಣ, ಧವಳ ಎಂಬ ಹಾಡಿನ ಸ್ವರೂಪ ಇತ್ಯಾದಿ ಲೇಖನಗಳೂ ಅವರ ಸಾಹಿತ್ಯ ಸಂಶೋಧನೆಯ ಅಮೃತ ಫಲಗಳು. ಪಾಂಡಿತ್ಯಕ್ಕೆ ಸಂಬಂಧಪಟ್ಟ ಅವರ ಸಂಶೋಧನ ಶಕ್ತಿಯ ಉಜ್ವಲ ಉದಾಹರಣೆ 'ಶಬ್ದವಿಹಾರ' ಎಂಬ ಚಿಕ್ಕ ಕೃತಿ. ಒಂದು ಶಬ್ದವನ್ನು ಹಿಡಿದುಕೊಂಡು ರೆಂಬೆ, ಕಾಂಡಗುಂಟ ಇಳಿದು, ಹಲವು ಬೇರುಗಳಲ್ಲಿ ಹರಿದಾಡಿ, ಮೂಲ ಬೇರನ್ನು ಮುಟ್ಟಿ ಹೇಳುವ ಅವರ ಸಾಹಸ ಇನ್ನೊಬ್ಬರಿಗೆ

ಅಸಾಧ್ಯವೆಂಬ ಭಾವನೆಯನ್ನು ಹುಟ್ಟಿಸುತ್ತದೆ. ಒಂದೊಂದು ಶಬ್ದ ಯಾವ ಜಿಲ್ಲೆಯ ಯಾವ ಊರಿನ ಯಾವ ಸ್ಥಳದ ಶಾಸನದಲ್ಲಿದೆ; ಯಾವ ಕವಿಯ ಯಾವ ಕಾವ್ಯದ ಯಾವ ಸಂದರ್ಭದಲ್ಲಿದೆ ಎಂದು ನಾಲಗೆಯ ತುದಿಯಲ್ಲಿ ನೆನಪಿಸಿಕೊಳ್ಳುವ, ಅಗಲಿಹೋದ ಅವುಗಳ ಸಂಬಂಧಿ ಪದಗಳನ್ನು ಅನ್ಯಭಾಷೆಗಳಿಂದ ಬೆರಳ ತುದಿಯಲ್ಲಿ ಎತ್ತಿ ತರುವ ಅವರ ಕೂರ್ಮ ಸಾಹಸ ಒಂದು ಲೀಲೆಯೆಂದೇ ಹೇಳಬೇಕು.

ಡಿ.ಎಲ್.ಎನ್. ಅವರ ವಿಮರ್ಶೆ ಪಕ್ಷ ಪಂಗಡಗಳ ಸಂಘರ್ಷಣೆಯಲ್ಲ, ನ್ಯಾಯಾಧೀಶನ ತೀರ್ಮಾನ. ಅವರ ದೃಷ್ಟಿಯಲ್ಲಿ ಪಂಪ, ಹರಿಹರ, ಕುಮಾರವ್ಯಾಸರು ಕನ್ನಡದ ಮಹಾಕವಿಗಳು. ಹರಿಹರ ಅವರ ಮೆಚ್ಚಿನ ಕವಿ. ಪುಷ್ಪದಂತ ಪುರಾಣ, ಅಗ್ಗಳದೇವ, ರುದ್ರಭಟ್ಟ, ಕುಮಾರವ್ಯಾಸನ ಕರ್ಣ ಮೊದಲಾದ ಲೇಖನಗಳು ಅವರ ನ್ಯಾಯದೃಷ್ಟಿಗೆ ನಿದರ್ಶನಗಳು. ಈ ಕಾಲದಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯನ್ನು ರೂಪಿಸಬಲ್ಲ ಮಹಾಶಿಲ್ಪಿ ಅವರೊಬ್ಬರೇ ಎಂದು ಎಲ್ಲರ ಭಾವನೆಯಾಗಿತ್ತು. ಅವರ ನಿಧನ ಎಲ್ಲರನ್ನೂ ನಿರಾಶೆಗೊಳಿಸಿತು.

**ಕಾರ್ಯ ತತ್ಪರತೆ:**

ಪಾಂಡಿತ್ಯ, ಸಂಶೋಧನೆಗಳ ಕಾಡಿನಲ್ಲಿ ಆನೆಯಂತೆ ನಡೆದ ಅವರ ಬರೆವಣಿಗೆ ಶುಷ್ಕವಾಗಿರದೆ ರಸವತ್ತಾಗಿದ್ದಿತು. "ಹಚ್ಚನೆಯ ಹುಲ್ಲುಗಾವಲ ಹರವಿನಲ್ಲಿ ಸ್ವೇಚ್ಛೆಯಾಗಿ ತಿರುಗಾಡುತ್ತ, ಸೊಂಪಾಗಿ ಕಾಣುವೆಡೆಗಳಲ್ಲಿ ತಂಗಿ, ಹಿಡಿಹುಲ್ಲನ್ನು ಕಬಳಿಸುವ ಹಸುವಿನಂತೆ ಇದೆ ನನ್ನ ವ್ಯಾಸಂಗದ ಹವ್ಯಾಸ. ನನ್ನ ಕೊಠಡಿಯ ಆರಾಮ ಕುರ್ಚಿಯ ಮೇಲೆ ಮಲಗಿ, ಕೈಗೆ ಎಟುಕಿದ ಪುಸ್ತಕ ತೆರೆದು, ಓದುತ್ತ ಓದುತ್ತ, ಇಹದ ತಾಪತ್ರಯ ದೂರ ಸರಿದಂತೆಲ್ಲ ತನ್ಮಯತೆಯ ಮಡುವಿನಲ್ಲಿ ಮೆಲ್ಲ ಮೆಲ್ಲನೆ ಮುಳುಗಿ ಬಿಡುತ್ತೇನೆ. ಪಕ್ಕದ ಮೇಜಿನ ಮೇಲೆ ಇರುವ ಗಂಧದ ಕಡ್ಡಿಗಳು ಉಗುಳುವ ಹೊಗೆ, ಸುರುಳಿ ಸುರುಳಿಯಾಗಿ ಅಂಕುಡೊಂಕಾಗಿ ಮೇಲೆ ಹರಡಿ, ಕೊಠಡಿಯ ಪರಿಮಿತಾಕಾಶದಲ್ಲಿ ಕರಗಿ ಹೋಗುವಂತೆ ನಾನೂ ಬಾರಿಬಾರಿಗೆ ಕರಗಿ ಹೋಗಬೇಕೆಂಬ ಹಂಬಲ ನನಗೆ ಹಿರಿದಾಗಿದೆ." ಈ ಬರೆವಣಿಗೆಯಲ್ಲಿ ಹರಿಹರನ ಗದ್ಯತನವಿದೆ. ಸಾವಿರಾರು ಕೆಟ್ಟ ಪದ್ಯಗಳನ್ನು ಬರೆದವನನ್ನು ಕವಿಯೆನ್ನುವುದಕ್ಕಿಂತ ಇಂಥ ಗದ್ಯ ಬರೆದವನನ್ನು ಕವಿಯೆನ್ನುವುದು ಲೇಸು. ಕೇವಲ ಪದ್ಯ ಬರೆದ ಮಾತ್ರಕ್ಕೆ ರಾಷ್ಟ್ರಮಟ್ಟದ ಗೌರವ ನೀಡುವಂತೆ, ಇಂಥ ವಿದ್ವತ್‌ಪೂರ್ಣ ವ್ಯವಸಾಯ ಗೆಯ್ದವರಿಗೂ ನೀಡುವುದು ನ್ಯಾಯ.

ಡಿ.ಎಲ್.ಎನ್. ಅವರು ಪ್ರಥಮ ವರ್ಗದ ಪ್ರಾಧ್ಯಾಪಕರೆಂದು ಅವರ ಶಿಷ್ಯಕೋಟಿಯ ಒಮ್ಮತದ ಅಭಿಪ್ರಾಯ. ೬೦ ನಿಮಿಷಕ್ಕೆ ಬದಲು ೫೯ ನಿಮಿಷಕ್ಕೆ ಸಾಲುವಷ್ಟು ಪಾಠ ಸಾಮಗ್ರಿ ತಮ್ಮ ಹತ್ತಿರ ಇದ್ದರೆ ಅವರು ವರ್ಗ ನಡೆಸುತ್ತಿರಲಿಲ್ಲ. ಉದ್ವೇಗ, ಅಂದಾಜು, ಆತ್ಮವಂಚನೆ, ಅಪ್ರಾಮಾಣಿಕತೆ ಇವು ಒಮ್ಮೆಯೂ ವರ್ಗದಲ್ಲಿ ಸುಳಿಯಲಿಲ್ಲ. ವಿದ್ಯಾರ್ಥಿಗಳಲ್ಲಿ ವ್ಯಾಸಂಗದ ಹವ್ಯಾಸ ಬೆಳೆಸಿ, ಹಸಿವನ್ನು ಹಿಂಗಿಸುವ ದಾರಿ ತೋರಿಸಿ, ಆ ದಾರಿಯಲ್ಲಿ ಎಡವಿದಾಗ ಎತ್ತಿ ನಿಲ್ಲಿಸಿ ಮುನ್ನಡೆಸಿದರು. ಇದನ್ನು ನೆನಪಿಟ್ಟು ಅವರ ವಿದ್ಯಾರ್ಥಿಗಳು, ಮಿತ್ರರು ಜ್ಞಾನೋಪಾಸಕ, ಹೊಸಬೆಳಕು, ಉಪಾಯನ ಎಂಬ ಸಂಭಾವನಾ ಗ್ರಂಥಗಳನ್ನು ಅರ್ಪಿಸಿ, ನಾಡಜನತೆ ಬೀದರ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರೆಂದು ಆರಿಸಿ ಕೃತಜ್ಞತೆಗಳನ್ನು ಸಲ್ಲಿಸಿದರು.

ಇವುಗಳಿಗಿಂತ ಡಿ.ಎಲ್.ಎನ್. ಅವರ ದೊಡ್ಡ ಆಸ್ತಿಯೆಂದರೆ ದೊಡ್ಡ ಮನಸ್ಸು. ತಮ್ಮ ನಿಲವಿಗೆ ತಕ್ಕ ಅಧಿಕಾರ ಸಿಗಲಿಲ್ಲವೆಂದು ಒಮ್ಮೆಯೂ ಅವರು ತುಟಿಬಿಚ್ಚಲಿಲ್ಲ, ಮನದಲ್ಲಿ ಆ ಭಾವನೆಯನ್ನು ಮೂಡಿಸಿಕೊಳ್ಳಲಿಲ್ಲ. ಇವರು ಸಂಪಾದಿಸಿದ 'ಶಬ್ದಮಣಿ ದರ್ಪಣ'ವನ್ನು ವಿಮರ್ಶಿಸುತ್ತ ನಾನು ಬರೆದ ಒಂದೆರಡು ಮಾತುಗಳು ಡಿ.ಎಲ್.ಎನ್. ಅವರಿಗೆ ನೋವನ್ನುಂಟು ಮಾಡಿದವು – ಎಂದು ಗೆಳೆಯರಿಂದ ತಿಳಿದಾಗ ನನಗೆ ನೋವಾಯಿತು. ಅವರು ತಮ್ಮ ಮುಂದಿನ ಆವೃತ್ತಿಯಲ್ಲಿ ಬರೆದ ಧಾರವಾಡದ ಕರ್ನಾಟಕ

ವಿಶ್ವವಿದ್ಯಾಲಯದ ಪ್ರೊ.ಮಲ್ಲಿನಾಥ ಕಲಬುರ್ಗಿ ಎಂ.ಎ. ಅವರು ದರ್ಪಣಾವಲೋಕನ ಎಂಬ ಹೆಸರಿನಲ್ಲಿ ಎರಡು ಲೇಖನಗಳನ್ನು ಬರೆದು ಪ್ರಕಟಿಸಿದ್ದಾರೆ. ಸೂತ್ರ, ವೃತ್ತಿ, ಟೀಕೆಗಳಲ್ಲಿ ಹಂಚಿ ಹೋಗಿರುವ ಸಾಹಿತ್ಯಗಳನ್ನೆಲ್ಲ ಅವರು ತುಂಬ ಶ್ರಮವಹಿಸಿ ಕಂಡುಹಿಡಿದಿದ್ದಾರೆ. ಇವರ ಲೇಖನಗಳು ಕಾರಣವಾಗಿ ಶಬ್ದಮಣಿ ದರ್ಪಣದ ಈ ಮುದ್ರಣ ಅವರ ಹಿಂದಿನ ಮುದ್ರಣಕ್ಕಿಂತ ಹೆಚ್ಚು ಸಮರ್ಪಕವಾಗಿದೆಯೆಂದು ಭಾವಿಸುತ್ತೇನೆ" ಎಂಬ ನಿರ್ವಿಕಾರ ಬರೆವಣಿಗೆಯನ್ನು ಓದಿದಾಗಲಂತೂ ನನ್ನನ್ನೇ ನಾನು ಹಳಿದುಕೊಂಡೆ, ಮನದಲ್ಲಿಯೇ ಅವರ ಕ್ಷಮೆ ಕೇಳಿಕೊಂಡೆ.

**ಲೇಖಕರ ಪರಿಚಯ:**



ಎಂ. ಮಲ್ಲಿನಾಥ ಕಲಬುರ್ಗಿಯವರು ೨೮.೧೧.೧೯೩೮ರಲ್ಲಿ ವಿಜಯಾಪುರ ಜಿಲ್ಲೆ ಸಿಂದಗಿ ತಾಲ್ಲೂಕಿನ ಗುಬ್ಬೇವಾಡದಲ್ಲಿ ಜನಿಸಿದರು. ಎಮ್.ಎ. ಸ್ನಾತಕೋತ್ತರ ಪದವಿಯನ್ನು ಪ್ರಥಮ ದರ್ಜೆಯಲ್ಲಿ ಪಡೆದ ಇವರು ಕರ್ನಾಟಕ ಕಾಲೇಜಿನಲ್ಲಿ ಮತ್ತು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿ ಅಧ್ಯಾಪಕರಾಗಿ ಹಾಗೂ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿ ಸೇವೆ ಸಲ್ಲಿಸಿದ್ದಾರೆ. ಇವರು ಮಾರ್ಗ, ಶಾಸನಗಳಲ್ಲಿ ಶಿವಶರಣರು, ಕನ್ನಡ ಹಸ್ತಪ್ರತಿ ಶಾಸ್ತ್ರ, ಚೆನ್ನ ಬಸವಣ್ಣನವರ ವಚನ ಮಹಾಸಂಪುಟ, ಕವಿರಾಜಮಾರ್ಗದ ಪರಿಸರದ ಸಾಹಿತ್ಯ ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಇವರಿಗೆ ೧೯೯೦ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ, ೧೯೯೧ರಲ್ಲಿ ಕರ್ನಾಟಕ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿ, ೧೯೯೬ರಲ್ಲಿ ಪಂಪ ಪ್ರಶಸ್ತಿ ಲಭಿಸಿದೆ. ಇವರು ನಮ್ಮ ನಾಡಿನ ಖ್ಯಾತ ಸಂಶೋಧಕರು ಮತ್ತು ವಿದ್ವಾಂಸರಲ್ಲಿ ಒಬ್ಬರಾಗಿದ್ದಾರೆ.

ಪ್ರಸ್ತುತ ಲೇಖನವನ್ನು ಎಮ್.ಎಮ್. ಕಲಬುರ್ಗಿಯವರ 'ಮಾರ್ಗ–ಸಂಪುಟ ೧' ಎಂಬ ಕೃತಿಯಿಂದ ಆರಿಸಿದೆ.



**ಓದಿ ತಿಳಿಯಿರಿ:**

ತತ್ತರಿಸು – ನಡುಗು, ಕಂಪಿಸು

ಕಮ್ಮಟ – ಟಂಕಸಾಲೆ, ನಾಣ್ಯ ತಯಾರಿಕೆಯ ಕೇಂದ್ರ, ಕಾರ್ಯಾಗಾರ

ಸಂಶೋಧನೆ – ಅನ್ವೇಷಣೆ, ಹುಡುಕಾಟ

ಪರಿವಾರ – ಬಳಗ

ಮನದಣಿ – ತೃಪ್ತಿಯಾಗು

ದೌಲತ್ತು – ಅಹಂಕಾರ, ಅಧಿಕಾರದ ದರ್ಪ

ಜಂಗಮ – ಚಲಿಸುವ, ಚಲನೆಯುಳ್ಳ

ಅಶಕ್ಯ – ಸಾಧ್ಯವಿಲ್ಲ

ಪ್ರಶಂಸೆ – ಹೊಗಳಿಕೆ

ಸತ್ತ್ವ – ತಿರುಳು, ಸಾರ

ಅನುಸಂಧಾನ – ಮುಖಾಮುಖಿಯಾಗಿ ಪ್ರತ್ಯಕ್ಷಜ್ಞಾನ ಪಡೆದುಕೊಳ್ಳುವುದು.

ಉಜ್ವಲ – ಹೊಳೆಯುವ, ಕಾಂತಿಯುಕ್ತ

ಕೂರ್ಮ – ಆಮೆ

ಲೀಲೆ – ಆಟ

ಸಂಘರ್ಷಣೆ – ಹೋರಾಟ, ತಿಕ್ಕಾಟ

ಶಿಲ್ಪಿ – ರೂವಾರಿ

ಶುಷ್ಕ – ಒಣಗಿದ, ತೇವರಹಿತ

ಹರವು – ವೈಶಾಲ್ಯ

ಹವ್ಯಾಸ – ಚಟ, ಗೀಳು

ತಾಪತ್ರಯ – ತೊಂದರೆ

ತನ್ಮಯತೆ – ಮಗ್ನತೆ, ಮೈಮರೆಯುವಿಕೆ, ತಲ್ಲೀನತೆ

ಉಪಾಯನ – ಕಾಣಿಕೆ, ಉಡುಗೊರೆ

ನಿರ್ವಿಕಾರ – ವಿಕಾರವಿಲ್ಲದ

ಹಳಿ – ನಿಂದಿಸು, ತೆಗಳು



## ಅಭ್ಯಾಸ

**ಅ. ಈ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರ ಬರೆಯಿರಿ:**

೧. ಡಿ.ಎಲ್.ಎನ್. ಅವರನ್ನು ನೋಡಿ, ಯಾರ ಮರಣ ದುಃಖವನ್ನು ಕನ್ನಡ ಸಾಹಿತ್ಯ ಪ್ರಪಂಚ ಮರೆಯುತ್ತಿತ್ತು?

೨. ಜನತೆಯ ಗಮನ, ಗೌರವಗಳನ್ನು ಡಿ.ಎಲ್.ಎನ್. ಯಾವುದರಿಂದ ಸಂಪಾದಿಸಿದರು?

೩. ವಡ್ಡಾರಾಧನೆ ಸಂಪಾದನೆ ಕಾರ್ಯ ಯಾವುದಕ್ಕೆ ಪರಮ ನಿದರ್ಶನವಾಗಿದೆ?

೪. ಡಿ.ಎಲ್.ಎನ್. ಅವರ ದೃಷ್ಟಿಯಲ್ಲಿ ಕನ್ನಡದ ಮಹಾಕವಿಗಳು ಯಾರು ಯಾರು?

೫. ಡಿ.ಎಲ್.ಎನ್. ಅವರ ಮೆಚ್ಚಿನ ಕವಿ ಯಾರು?

**ಆ. ಈ ಪ್ರಶ್ನೆಗಳಿಗೆ ಮೂರು / ನಾಲ್ಕು ವಾಕ್ಯಗಳಲ್ಲಿ ಉತ್ತರ ಬರೆಯಿರಿ:**

೧. ಡಿ.ಎಲ್.ಎನ್ ರವರ ಬಹುಮುಖ ದುಡಿಮೆಯನ್ನು ವಿವರಿಸಿ.

೨. ತೀ.ನಂ.ಶ್ರೀ. ಯವರು ಡಿ.ಎಲ್.ಎನ್. ರವರ ಪಾಂಡಿತ್ಯದ ಬಗ್ಗೆ ಏನು ಹೇಳಿದ್ದಾರೆ?

೩. ಡಿ.ಎಲ್.ಎನ್ ರವರ ಸಾಹಿತ್ಯ ಸಂಶೋಧನೆಯ ಅಮೃತ ಫಲಗಳು ಯಾವುವು?

೪. ತಮ್ಮ ವ್ಯಾಸಂಗದ ಹವ್ಯಾಸದ ಬಗ್ಗೆ ಡಿ.ಎಲ್.ಎನ್.ರವರು ಹೇಳಿರುವ ಮಾತುಗಳನ್ನು ಬರೆಯಿರಿ.

ಇ. **ಸಂದರ್ಭದೊಂದಿಗೆ ಈ ವಾಕ್ಯಗಳ ಅರ್ಥವನ್ನು ಸ್ಪಷ್ಟೀಕರಿಸಿರಿ:**

೧. "ಡಿ.ಎಲ್.ಎನ್. ಎಂದರೆ ಪಾಂಡಿತ್ಯ, ಪಾಂಡಿತ್ಯ ಎಂದರೆ ಡಿ.ಎಲ್.ಎನ್."

೨. "ಅವರ ದೊಡ್ಡ ಆಸ್ತಿಯೆಂದರೆ ದೊಡ್ಡ ಮನಸ್ಸು."

೩. "ಮನದಲ್ಲಿಯೇ ಅವರ ಕ್ಷಮೆ ಕೇಳಿಕೊಂಡೆ."

## ಭಾಷಾಭ್ಯಾಸ

ಅ. **ಈ ಕೆಳಕಂಡ ಶಬ್ದಗಳ ವಿರುದ್ಧಾರ್ಥಕ ರೂಪಗಳನ್ನು ಬರೆಯಿರಿ:**

ಮರಣ, ಗೌರವ, ಜಂಗಮ, ಹಿರಿದು, ನ್ಯಾಯ, ಬೆಳಕು, ವಿಶೇಷ, ಪರಿಪೂರ್ಣ, ಶುದ್ಧಿ, ಶಕ್ತಿ, ಅಸಾಧ್ಯ, ಮುಳುಗು, ನೋವು.

ಆ. **ಈ ಕೆಳಕಂಡ ಶಬ್ದಗಳಿಗೆ ತದ್ಭವ ರೂಪಗಳನ್ನು ಬರೆಯಿರಿ:**

ದುಃಖ, ಕಾರ್ಯ, ವಿದ್ಯಾ, ಕಾವ್ಯ

ಇ. **ಈ ಕೆಳಕಂಡ ಶಬ್ದಗಳ ಪದ ವಿಭಾಗ ಮಾಡಿ ಸಂಧಿಯನ್ನು ಹೆಸರಿಸಿ.**

ವಿದ್ಯಾರ್ಥಿ, ಹಳೆಗನ್ನಡ, ಉದ್ದಗಲ, ರಾಮಾಭ್ಯುದಯ, ಭುವನೈಕ, ಹುಲ್ಲುಗಾವಲು, ನೆನಪಿಟ್ಟು, ಜ್ಞಾನೋಪಾಸಕ, ದರ್ಪಣಾವಲೋಕನ

ಈ. **ಈ ಕೆಳಕಂಡ ಪದಗಳನ್ನು ಬಳಸಿ ಸ್ವಂತ ವಾಕ್ಯ ರಚಿಸಿರಿ:**

ತತ್ತರಿಸಿ ಹೋಗು, ಸಂಶೋಧನೆ, ಬುನಾದಿ, ನಿರಾಳಗೊಳಿಸು, ಮುನ್ನಡೆಸು

ಉ. **ಇವುಗಳ ಅನ್ಯಲಿಂಗ ರೂಪವನ್ನು ಬರೆಯಿರಿ:**

ತಂದೆ, ವಿದ್ಯಾರ್ಥಿ, ಅಜ್ಜಿ, ರಾಣಿ, ಪುರುಷ, ಮಾವ, ಚಿಕ್ಕಮ್ಮ, ಮೊಮ್ಮಗಳು

ಊ. **ಇವುಗಳ ವಚನವನ್ನು ಬದಲಾಯಿಸಿ ಬರೆಯಿರಿ:**

ಮಕ್ಕಳು, ಅಮ್ಮ, ಕಾಡುಗಳು, ಮನೆ, ಗುರುತುಗಳು, ಮಾನವ

ಋ. **ಈ ಕೆಳಕಂಡ ಕ್ರಿಯಾಪದಗಳ ಧಾತುವನ್ನು ಗುರುತಿಸಿ ಬರೆಯಿರಿ:**

ತೋರುತ್ತದೆ, ಬಿಡುತ್ತೇನೆ, ಸಲ್ಲಿಸಿದರು, ಕಂಡುಹಿಡಿದಿದ್ದಾರೆ

ಎ. **ಈ ಕೆಳಕಂಡ ಶಬ್ದಗಳ ನಾನಾರ್ಥವನ್ನು ತಿಳಿಸಿರಿ:**

ಹಳಿ, ಕಳೆ, ಕಣ, ಕಾಡು

## ಚಟುವಟಿಕೆ:

೧. 'ಜ್ಞಾನೋಪಾಸಕ' ಸಂಭಾವನಾ ಗ್ರಂಥವನ್ನು ಓದಿರಿ.

೨. ಹಳೆಗನ್ನಡ ಕವಿಗಳು ಮತ್ತು ಅವರ ಕೃತಿಗಳ ಪಟ್ಟಿ ತಯಾರಿಸಿರಿ.

೩. ಈ ಭಾಗದಲ್ಲಿ ಉಲ್ಲೇಖಿಸಲಾಗಿರುವ ವಿದ್ವಾಂಸರ ಭಾವಚಿತ್ರಗಳನ್ನು ಸಂಗ್ರಹಿಸಿರಿ.

## ನುಡಿಗಟ್ಟು

ವಿಶೇಷಾರ್ಥವನ್ನು ಕೊಡುವ, ಅರ್ಥವ್ಯಾಪ್ತಿಯನ್ನು ವಿಸ್ತರಿಸುವ, ವಿಶೇಷ ರೀತಿಯ ಪದಪುಂಜವನ್ನು 'ನುಡಿಗಟ್ಟು' ಎಂದು ಕರೆಯುತ್ತಾರೆ. ನುಡಿಗಟ್ಟು ಬಳಸುವ ಸಂದರ್ಭಕ್ಕನುಗುಣವಾಗಿ ವಿಶೇಷವಾದ ಅರ್ಥವನ್ನು ಕೊಡುತ್ತದೆ. ನುಡಿಗಟ್ಟುಗಳ ಬಳಕೆಯಿಂದ ಭಾಷೆಯ ಬಂಧ ಮತ್ತು ಸೊಬಗು ಹೆಚ್ಚಾಗುತ್ತದೆ. ನುಡಿಗಟ್ಟಿನಲ್ಲಿ ಸೇರಿರುವ ಪದಗಳ ಅರ್ಥಕ್ಕಿಂತ ನುಡಿಗಟ್ಟಿನ ಅರ್ಥ ಬೇರೆಯಾಗಿರುತ್ತದೆ.

ನುಡಿಗಟ್ಟುಗಳಿಗೆ ಕೆಲವು ಉದಾಹರಣೆಗಳು

| **ನುಡಿಗಟ್ಟು** | **ಅರ್ಥ ವಿಶೇಷ** |
|---|---|
| ಮೈ ಮರೆ | ಎಚ್ಚರ ತಪ್ಪು, ತಲ್ಲೀನನಾಗು |
| ವಿಷಕಾರು | ಅಸೂಯೆಪಡು, ಕೆಟ್ಟದ್ದನ್ನು ಯೋಚಿಸು |
| ನಿಟ್ಟುಸಿರು ಬಿಡು | ನೋವನ್ನು ಸೂಚಿಸು, ಬಿಡುಗಡೆ ಹೊಂದು |
| ಹೊಂಚು ಹಾಕು | ಸಮಯವನ್ನು ನೀರಿಕ್ಷಿಸು |
| ಕೈ ಕೊಡು | ಸಹಾಯಮಾಡು, ಮೋಸಮಾಡು |
| ಕಣ್ತೆರೆ | ಎಚ್ಚರಗೊಳ್ಳು |
| ಶತಾಯ ಗತಾಯ | ಹೇಗಾದರೂ, ಏನಾದರೂ |
| ಕಾಡು ಪಾಲಾಗು | ಪರದೇಶಿಯಾಗು, ಅನಾಥನಾಗು |
| ಹೊಟ್ಟೆಯುರಿ | ಅಸೂಯೆ |
| ತಲೆಬಾಗು | ಶರಣಾಗು, ಒಪ್ಪು |
| ಕಾಲಿಗೆ ಬುದ್ಧಿ ಹೇಳು | ಓಡಿ ಹೋಗು |
| ಕಣ್ಣು ಕೆಂಪಗೆ ಮಾಡು | ಕೋಪಿಸಿಕೋ |
| ಬೆನ್ನು ತಟ್ಟು | ಪ್ರೋತ್ಸಾಹಿಸು |
| ಗಂಟಲು ಕಟ್ಟು | ಗದ್ಗದಿತನಾಗು |
| ಮುಖ ಕಪ್ಪಾಗು | ಅವಮಾನ ಹೊಂದು, ಪೆಚ್ಚಾಗು |



## ಆಡುನುಡಿ – ಗ್ರಾಂಥಿಕ ರೂಪ

ಮಾತನಾಡುವ ಭಾಷೆಯನ್ನು 'ಆಡುನುಡಿ' ಎಂದು ಕರೆಯುತ್ತಾರೆ. ಇದಕ್ಕೆ 'ವ್ಯಾವಹಾರಿಕ ಭಾಷೆ' ಎಂಬ ಮತ್ತೊಂದು ಹೆಸರೂ ಇದೆ. ಆಡುನುಡಿಯ ಶಬ್ದಗಳು ಬರವಣಿಗೆಯಲ್ಲಿ ಬಂದಾಗ ಅವು ಹೊಂದುವ ರೂಪವೇ ಗ್ರಾಂಥಿಕ ರೂಪ.

ಆಡು ನುಡಿಯ ಶಬ್ದಗಳು ಪ್ರದೇಶದಿಂದ ಪ್ರದೇಶಕ್ಕೆ ಬದಲಾಗುತ್ತವೆ. ಇವುಗಳ ಅರ್ಥದಲ್ಲಿ ಏಕರೂಪತೆಯನ್ನು ತರುವ ಪ್ರಯತ್ನವನ್ನು ಗ್ರಾಂಥಿಕ ರೂಪಗಳಲ್ಲಿ ಕಾಣಬಹುದು.

ಉದಾಹರಣೆಗಳು:

| **ಆಡುನುಡಿ** | **ಗ್ರಾಂಥಿಕ ರೂಪ** |
|---|---|
| ಕೂತ್ಕೊ, ಕುಂದ್ರು, ಕೂಡು | ಕುಳಿತುಕೊ |

| | |
|---|---|
| ಮ್ಯಾಲೆ | ಮೇಲೆ |
| ತುಂಬೈತಿ | ತುಂಬಿದೆ |
| ನೀರಿಲ್ದ | ನೀರಿಲ್ಲದ |
| ತಲೇಲಿ | ತಲೆಯಲ್ಲಿ |
| ಕಂದವ್ನ | ಕಂದವ್ವನ |
| ಪಕ್ಕ್ಯಾಗ | ಪಕ್ಕಿಯಲ್ಲಿ, ಪಕ್ಕಿಗಳಲ್ಲಿ |
| ತಾಯಿಲ್ದ | ತಾಯಿಯಿಲ್ಲದ |
| ಐತಿ (ಐತೆ) | ಇದೆ |
| ತಿಟ್ಹತ್ತಿ | ತಿಟ್ಟು ಹತ್ತಿ |
| ಸನ್ನೇಸಿ | ಸನ್ಯಾಸಿ |
| ಚಿಕ್ಕ್ಯಾಗ | ಚಿಕ್ಕಿಯಲ್ಲಿ, ಚಿಕ್ಕಿಗಳಲ್ಲಿ |
| ಬಿಡುತೀನಿ | ಬಿಡುತ್ತೇನೆ |
| ಗೂಡಿನ್ಯಾಗ | ಗೂಡಿನಲ್ಲಿ |
| ಮ್ಯಾಲಿನ | ಮೇಲಿನ |
| ಬ್ಯಾಡ | ಬೇಡ |
| ತಕ್ಕೊಂಡು | ತೆಗೆದುಕೊಂಡು |
| ಏಸೊಂದು | ಎಷ್ಟೊಂದು |
| ಆಯ್ತು | ಆಯಿತು |
| ಬರ್ತಾನೆ | ಬರುತ್ತಾನೆ |
| ನೋಡ್ಕೊಂಡು | ನೋಡಿಕೊಂಡು |
| ಆಡ್ತಾ | ಆಡುತ್ತಾ |



## ಗಾದೆ ವಿಸ್ತರಣೆ

ಜನಪದ ಸಾಹಿತ್ಯದ ಒಂದು ಪ್ರಮುಖ ಭಾಗವಾಗಿರುವ ಗಾದೆಗಳು ಜನಸಾಮಾನ್ಯರ ಅನುಭವದ ಗಣಿಯಾಗಿದ್ದು 'ವೇದ ಸುಳ್ಳಾದರೂ ಗಾದೆ ಸುಳ್ಳಾಗದು' ಎಂಬ ಹಿರಿಮೆಗೆ ಪಾತ್ರವಾಗಿವೆ. ಆಕಾರದಲ್ಲಿ ವಾಮನನಂತಿದ್ದರೂ ಅರ್ಥದಲ್ಲಿ ಇವು ತ್ರಿವಿಕ್ರಮನಂತಿವೆ. ಸುಂಭಾಷಣೆ ಮತ್ತು ಬರೆವಣಿಗೆಯ ಸಂದರ್ಭದಲ್ಲಿ ಸಮಯೋಚಿತವಾಗಿ ಗಾದೆಗಳನ್ನು ಬಳಸುವುದರಿಂದ ಸಾಹಿತ್ಯ ಸೌಂದರ್ಯ ಹೆಚ್ಚುವುದಲ್ಲದೆ, ಹೇಳಬೇಕೆಂದಿರುವ ವಿಷಯವನ್ನು ಮನಮುಟ್ಟುವಂತೆ ರಸವತ್ತಾಗಿ ಹೇಳಲು ಸಾಧ್ಯವಾಗುತ್ತದೆ.

ಗಾದೆಗಳ ಸಂಗ್ರಹಣೆ ಒಂದು ಉತ್ತಮ ಹವ್ಯಾಸವಾಗಿದೆ.

ಇಲ್ಲಿ ಗಾದೆ ವಿಸ್ತರಣೆಗೆ ಎರಡು ನಿದರ್ಶನಗಳನ್ನು ಕೊಡಲಾಗಿದೆ.

